# ಪಂಚಮ

ಸಂಪುಟ : 1 | ಸೋಮವಾರ, 5-7-1976 | ಬೆಲೆ : 20 ಪೈಸೆ | ಸಂಚಿಕೆ : 3

1. [ಲಾ ಇಕ್ ರಾಹ ಫಿದ್ದೀನ್]
ಬೇರೆ ಧರ್ಮಗಳೊಂದಿಗೆ ಸಹನೆ ಇರಲಿ.
2. [ಲಕುಂ ದೀನಕುಂ ಒಲಿಯಾದೀನ್]
ಅವರವರ ಧರ್ಮ ಅವರವರಿಗೆ ಪ್ರಿಯ.
3. [ಖಲಖಕುಂ ಮಿನ್ ನಫ್ ಸಿರ್ಯೊ ವಾಹಿದಿತಿನ್ ವ ಖಲಖ ಮಿನ್ ಹಾ ಜವ್ ಜಹಾ ಕಾನನ್ನಾಸ್, ಉಮ್ಮತೊರ್ ವಾಹಿದತನ್ ಇನ್ನ ಅಕ್ ರಮುಕುಂ ಇಂದಲ್ಲಾಹಿ ಅತ್ ಖಾಕುಮ್]
ಅಲ್ಲಾಃ(ದೇವರು) ಎಲ್ಲ ಮಾನವರನ್ನು ಒಬ್ಬನಿಂದಲೇ ಹುಟ್ಟಿಸಿ ವೃದ್ಧಿಸಿದ್ದಾನೆ. ಆದ್ದರಿಂದ ಎಲ್ಲ ಮಾನವರು ಮಾನವೀಯತೆಯ ದೃಷ್ಟಿಯಿಂದ ಸಮಾನರಾಗಿದ್ದಾರೆ- ಒಂದೇ ಕುಟುಂಬದ ಸದಸ್ಯರಂತೆ. ['ಕುರಾನ್'ನಿಂದ]

## ಹೀನ ಹಿಂದೂಧರ್ಮಕ್ಕೆ ವಾಲುತ್ತಿರುವ ಮುಸ್ಲಿಂರು:

# ದೊಡ್ಡಕೌಲಂದೆಯಲ್ಲಿ ಹರಿಜನರಿಗೆ ಕಿರುಕುಳ

ಹರಿಜನರು ಮುಂದೆ ಹೆಜ್ಜೆ ಇಟ್ಟಂತೆಲ್ಲ ಸಹಿಸದ ಪಟ್ಟಭದ್ರಹಿತಗಳು ಅಡ್ಡಿ ಆತಂಕಗನ್ನು ತಂದೊಡ್ಡುವುದೂ ಜೊತೆಗೇ ಇರುತ್ತದೆ. ಅಸ್ಪೃಶ್ಯತೆಯು ಹೀನವಾದ ಹಿಂದೂ ಧರ್ಮದ ಲಕ್ಷಣ. ಈ ಹೀನವಾದ ಹಿಂದೂ ಧರ್ಮದ ಪ್ರಭಾವಕ್ಕೆ ಮುಸ್ಲಿಂ ಜನರೂ ಕೂಡ ಒಳಗಾಗುತ್ತಿದ್ದಾರೆ. ತಮ್ಮ ಮುಸ್ಲಿಮತ್ವವನ್ನು ಬಿಟ್ಟು ಹಿಂದುತ್ವದ ಕಡೆಗೆ ಅವರಿಗೆ ಅರಿವಿಲ್ಲದೆಯೇ ವಾಲುತ್ತಿದ್ದಾರೆ. ಹೇಗೆಂದರೆ ಹಿಂದೂ ಧರ್ಮದ ವಿಶೇಷ ಲಕ್ಷಣವಾದ ಅಸ್ಪೃಶ್ಯತೆಯನ್ನು ಮುಸ್ಲಿಮರೂ ಆಚರಿಸುತ್ತಿದ್ದಾರೆ. ಇದರಿಂದಾಗಿ ಹಿಂದೂ ಧರ್ಮಕ್ಕಿಂತ ಉತ್ತಮ ಧರ್ಮವಾದ ಮುಸ್ಲಿಂ ಧರ್ಮಕ್ಕೆ ಮುಸ್ಲಿಮರೇ ಮಸಿ ಬಳಿಯುತ್ತಿದ್ದು ಅಪಚಾರ ಮಾಡುತ್ತಿರುವರು.

ಮುಸ್ಲಿಮರು ಅಸ್ಪೃಶ್ಯತೆಯನ್ನು ಆಚರಿಸುತ್ತಿರುವ ಘಟನೆಗಳು ನಂಜನಗೂಡಿಗೆ ಏಳು ಮೈಲಿ ದೂರವಿರುವ ದೊಡ್ಡಕವಲಂದೆ ಗ್ರಾಮದಿಂದ ವರದಿಯಾಗಿದೆ. ಈ ದೊಡ್ಡಕವಲಂದೆಯು ಹೋಬಳಿ ಸ್ಥಳವಾಗಿದ್ದು ಸಾಕಷ್ಟು ದೊಡ್ಡ ಊರಾಗಿದೆ. ಪೋಲೀಸ್ ಸ್ಟೇಷನ್ ಇದೆ. ಆಸ್ಪತ್ರೆ ಇದೆ. ಮತ್ತು ಈ ಊರಲ್ಲಿ ಬಹು ಸಂಖ್ಯೆಯಲ್ಲಿ ಮುಸ್ಲಿಮರೂ ಕಮ್ಮಿ ಸಂಖೆಯಲ್ಲಿ ಹರಿಜನರು ವಾಸವಾಗಿರುವರು. ಬಹಳ ಹಿಂದಿನಿಂದಲೂ ಸಾರ್ವಜನಿಕ ಸ್ಥಳಗಳಿಗೂ ಹರಿಜನರಿಗೆ ಪ್ರವೇಶ ಎಟುಕದಾಗಿದೆ. ಇತ್ತೀಚಿಗೆ ಒಂದಿಬ್ಬರು ವಿದ್ಯಾವಂತ ಹರಿಜನ ತರುಣರು ಆ ಸುತ್ತಮುತ್ತ ಇರುವ ಜೀತ, ಗಿರವಿ, ಬಡ್ಡಿಸಾಲ, ಹರಿಜನರ ಹೋಟೆಲ್ ಪ್ರವೇಸ, ಕ್ಷೌರದ ಅಂಗಡಿ ಪ್ರವೇಶ ಮುಂತಾದ ಚಟುವಟಿಕೆಗಳನ್ನು ಮಾಡುತ್ತಿರುವುದು ಈ ಊರಿನಲ್ಲಿ ಸಣ್ಣಪುಟ್ಟ ಗಲಾಟೆಗೆ ಎಡೆಮಾಡಿಕೊಡುತ್ತಿದೆ. ಇದೇ ಜೂನ್ ತಿಂಗಳು ದಿ|| 6, 9, 10 ರಂದು ನಡೆದ ಘಟನೆಗಳು ಹೀಗಿವೆ:

ಜೂನ್ 6ನೇ ತಾರೀಖಿನಂದು ಬೇಕಿಮಾದಪ್ಪನ ಹೋಟೆಲಿಗೆ 9ಜನ ಹರಜರು ಹೋಗಿ ಕಾಫಿ ಕೇಳಿದಾಗ ಹೋಟೆಲಿನವನು ಅವರಿಗಾಗಿಯೇ ಇಟ್ಟಿದ್ದ ಗ್ಲಾಸ್ ತಕ್ಕಳಿ ಅಂದ. ಇವರು ತೆಗೆದುಕೊಳ್ಳಲಿಲ್ಲ. ಮತ್ತೆ ಕೇಳಿದಾಗ ಕಾಫಿ ಇಲ್ಲ ಎಂಬ ಉತ್ತರ ಬಂತು ಇದಾದ ಸ್ವಲ್ಪ ಹೊತ್ತಾದ ಮೇಲೆ ಬೇರೆ ಜನ (ಸವರ್ಣಿಯರು) ಬಂದು ಇವರ ಎದುರಲ್ಲೇ ಕಾಫಿ

(ಎರಡನೆ ಪುಟಕ್ಕೆ)

## ಇಕ್ಕಳಕ್ಕೆ ಸಿಕ್ಕ ಮುತ್ತೂರಿನ ದಲಿತರು

ಪಿರಿಯಾಪಟ್ಟಣ ತಾಲ್ಲೂಕ್ ಮುತ್ತೂರು ಪಂಚಾಯ್ತಿಗೆ ಸೇರಿದ ಕಾಳೇತಿಮ್ಮನ ಹಳ್ಳಿಯ ಹರಿಜನರು ಅಲ್ಲಿನ 76 ನೇ ಸರ್ವೆ ನಂಬರಿನಲ್ಲಿ 20 ವರ್ಷಗಳಿಂದಲೂ ಕಾಡು ಕಡಿದು, ಬೇರು ಕಿತ್ತು ಸರ್ಕಾರಿ ಭೂಮಿಯಲ್ಲಿ ಬೇಸಾಯ ಮಾಡಿಕೊಂಡು ಬರುತ್ತಿದ್ದರು. ಇವರಿಗೆ ಬೇರೆಲ್ಲೂ ಜಮೀನು ಇಲ್ಲದಿರುವುದರಿಂದ ಇದೇ ಭಾಗ್ಯ ಅಂತ ತಿಳಿದಿದ್ದರು.

ಆದರೆ ಒಮ್ಮೆ ಇದ್ದಕ್ಕಿದ್ದಂತೆ ಇಲ್ಲಿನ ಕೆಲವರಿಗೆ ತಹಶಿಲ್ದಾರರಿಂದ ನೋಟೀಸೊಂದು ಬಂತು. ಇದರಲ್ಲಿ ಸದರಿ ಹರಿಜನರು ಜಮೀನನ್ನು ಖಾಲಿ ಮಾಡಬೇಕು. ಇಲ್ಲದಿದ್ದರೆ ಕಾನೂನುಕ್ರಮ ತೆಗೆದುಕೊಳ್ಳಲಾಗುವುದೆಂದು ಬರೆದಿತ್ತು. (ಆರ್. ವಿ ಒ | ಇ ವಿ ಐ| ನಂ 68 | 76 | 77. ಟಿ ಟಿ ಡಿ ಆರ್ 905 | 72-73 ) ಇದೇ ನೋಟೀಸು ಇಡೀ ತಾಲ್ಲೂಕಿನ ಸಾವಿರಾರು ದಲಿತರಿಗೆ ಬಂದಿರುವುದೆಂದು ಗೊತ್ತಾಗಿದೆ. ಇದರಿಂದ ಅಲ್ಲಿನ ಹರಿ|ಗಿರಿಜನರು ಯೋಚಿಸುವಂತಾಗಿದೆ.

ರಾಷ್ಟ್ರದ ಇಂದಿನ ದೊಡ್ಡ ಕಾರ್ಯಕ್ರಮಗಳಲ್ಲಿ ದಲಿತೋದ್ಧಾರವೂ ಒಂದು. ಆದರೆ ಆ ದಲಿತರಿಗೇ ಹಿಂಸೆ ಕೊಡುವ ಕೆಲಸ ಈ ತಹಶೀಲ್ದಾರರಿಂದ ಆಗುತ್ತಿದೆ. ಇದರ ಹಿಂದೆ ಏನು ಅಡಗಿದೆಯೋ ಗೊತ್ತಿಲ್ಲ. ಸಂಬಧ ಪಟ್ಟವರು ಕೂಡಲೇ ಇದರತ್ತ ಗಮನ ಹರಿಸಿ ಕಷ್ಟದಲ್ಲಿರುವ ದಲಿತರಿಗೆ ಪರಿಹಾರದೊರಕಿಸಿ ಕೊಡಬೇಕೆಂದು ಪಂಚಮ ಒತ್ತಾಯಿಸುತ್ತದೆ. ಮೇಲಿನದು ಸರ್ಕಾರಕ್ಕೆ ಸಂಬಂಧ ಪಟ್ಟದುದಾದರೆ ಅಲ್ಲಿನ ಸವರ್ಣಿಯರಿಗೆ ಸಂಬಂಧಿಸಿದ ಇನ್ನೊಂದು ಇಲ್ಲಿದೆ. ಇದೇ ಮುತ್ತೂರು ಗ್ರಾಮದಲ್ಲಿ ತಾ||0 5 76ನೇ ಸೋಮವಾರ ಅಸ್ಪೃಶ್ಯತಾ ನಿವಾರಣಾ ದಿನಾಚರಣೆ ಎಂಬುದಾಗಿ ಸಮಾರಂಭವೊಂದನ್ನು ನಡೆಸಲಾಯಿತು.

ಈ ದಿನಾಚರಣೆಯ ಅಂಗವಾಗಿ ಅದು ಹರಿಜನ ಕಾಲೊನಿಗಳ ನಿರ್ಮಲೀಕರಣ ಹಾಗೂ ರಿಪೇರಿಯನ್ನು ಸಾಮೂಹಿಕವಾಗಿ ಮಾಡುವುದು, ಸಾರ್ವಜನಿಕರು ಕುಡಿವ ನೀರಿನ ಬಾವಿಗಳಲ್ಲಿ ಹರಿಜನರಿಂದ ನೀರು ಸೇದಿಸುವುದು, ಉಪಹಾರ ಗೃಹಗಳಿಗೆ ಪ್ರವೇಶ, ಸಾರ್ವಜನಿಕ ಕ್ರೀಡೆಗಳು, ವಸ್ತುಪ್ರದರ್ಶನ ಮುಂತಾದ ಕಾರ್ಯಕ್ರಮಗಳನು ಇಟ್ಟುಕೊಳ್ಳಲಾಗಿತ್ತು.

ಆದರೆ ಈ ಯಾವ ಕಾರ್ಯಕ್ರಮಗಳೂ ಆಗಲಿಲ್ಲ. ಆದರೆ ಕಡೆಯಲ್ಲಿ ಸಭೆ ಮಾತ್ರ ಸೊಗಸಾಗಿ ಮುಗಿಯಿತು. ಇದರ ಹಿಂದಿನ ಕರಾಮತ್ತು ಹಿಂಗಿದೆ: ಇಲ್ಲಿನ ಪಂಚಾಯಿತಿ ಅಧ್ಯಕ್ಷರು ಹರಿಜನರು. ಅಂದಿನ ಸುಧಾರಣಾ ಕಾರ್ಯಕ್ರಮ ಮಾಡಲು ಪ್ರಯತ್ನಿಸಿದಾಗ ಅಲ್ಲಿನ ಸವರ್ಣೀಯರಿಂದ ವಿರೋಧ ಬಂತು. ಅಲ್ಲದೆ ಉದ್ರಿಕ್ತ ಪರಿಸ್ಥಿತಿಯನ್ನೂ ಎದುರಿಸುವಂತಾಯಿತು. ಇದರಿಂದ ಅಂಜಿದ ಅಧ್ಯಕ್ಷರು ಯಾವ ಕಾರ್ಯಕ್ರಮವನ್ನೂ ಮಾಡಲಿಲ್ಲ. ಆದರೂ ಇದರಿಂದ ಕೆಲವು ಮುಖಂಡರಿಗೆ ಸಖತ್ತು ಲಾಭ. ಕಾರ್ಯಕ್ರಮಗಳ ಪಟ್ಟಿ ಪ್ರಕಟಿಸಿದ್ದ ಕರಪತ್ರ ಹಿಡಿದು ಯಾರಿಗಾದರೂ ತೋರಿಸಿ 'ಶಭಾಷ್ 'ಗಿಟ್ಟಿಸಿರಬಹುದು.

ಇಂದೂ ಇಲ್ಲಿನ ಬಾವಿಗಳಲ್ಲಿ ದಲಿತರಿಗೆ ನೀರಿಲ್ಲ. ದೇವಸ್ಥಾನಗಳಿಗೆ ಪ್ರವೇಶವಿಲ್ಲ. ಹೋಟೆಲಿಗೆ ಪ್ರವೇಶವಿಲ್ಲ. ದಲಿತೋದ್ಧಾರ ಎಲ್ಲಿ ಆಗುತ್ತಿದೆ ಎಂಬುದು ನಮಗೆ ಗುಮಾನಿಯಾಗಿದೆ ಇಂಥದಕ್ಕೆ ಇನ್ನು ಮುಂದಾದರೂ ಅವಕಾಶ ಕೊಡದೆ, ಮಾನವೀಯ ದೃಷ್ಟಿಯನ್ನು ಬೆಳೆಸಲು ಇಂಥ ಕಾರ್ಯಕ್ರಮಗಳನ್ನು ಬಲವಂತವಾಗಿಯಾದರೂ ಮಾಡಬೇಕೆಂದು ಪಂಚಮ ಒತ್ತಾಯಿಸುತ್ತದೆ.

# ನಾಲುತ್ತಿರುವ ಮುಸ್ಲಿಂರು : ಹರಿಜನರಿಗೆ ಕಿರುಕುಳ

(ಮೊದಲ ಪುಟದಿಂದ)

ಕುಡಿದು ಹೋದರು. ಇದನ್ನು ಕಂಡ ಹರಿಜನರು ಶಾಂತ ರೀತಿಯಲ್ಲೇ ಪೋಲಿಸ್ ಕಂಪ್ಲೈಂಟ್ ಕೊಟ್ಟರು.

ಮತ್ತೆ 9ನೇ ತಾರೀಖಿನಂದು 25 ರ ವಯಸ್ಸಿನ ಹರಿಜನ ಯುವಕ ಶ್ರೀ ನಂಜುಂಡಯ್ಯ ಎಂಬುವರು ಸೆಲೂಗೆ ಚವರಮಾಡಿಸಲು ಹೋಗಿ ಕುಂತಿದ್ದರು. ನಂಜುಂಡಯ್ಯ ಬಂದ ಮೇಲೆ ನಾಕಾರು ಜನ ಬಂದರು. ಅವರೇ ಚವರ ಮೊದಲು ಮಾಡಿಸಿ ಕೊಂಡರು. ಅಮೇಲೆ ಅವರಿಗೆಲ್ಲ ಮಾಡಿ ಮುಗಿ ಯುವ ಹೊತ್ತಿಗೆ ಶ್ರೀ ಫಿಯಾಜ್ ಎಂಬುವನು ಬಂದು ತಾನೇ ಮೊದಲು ಬ ದೆನೆಂದು ರೋಫ್ ಮಾಡಿ ತಾನೇ ಮೊದಲು ಚವರ ಮಾಡಿಸಿಕೊಂಡು ಹೋದ. ಅವನದಾದಮೇಲೆ ನಂಜುಂಡಯ್ಯ ಚವ ರಕ್ಕೆ ಕೂತರು. ಹಜಾಮು 'ನಿನಗಾವರೆ ಜಾಸ್ತಿ ಹಣ' ಅಂದ. ನಂಜುಂಡಯ್ಯ ಅದಕ್ಕೆ 'ಯಾಕೆ? ಎಲ್ಲರಿಗೆ ಎಷ್ಟು ತಕ್ಕತ್ತಿಯೋ ನನಗೂ ಅಷ್ಟೇ ತಕ್ಕೊ' ಅಂದ. ಅಷ್ಟೊತ್ತಿಗೆ ಅಲ್ಲೇ ನಿಂತಿದ್ದ ಫಿಯಾಜ್ ಬಂದವನು 'ನಾನೆಷ್ಟಾದ್ರೂ ಕೊಡ್ತಿನಿ ನಿಂಗ್ಯಾಕೆ' ಅಂದು ನಂಜುಂಡಯ್ಯನ ಜೊತೆ ತೀಟೆ ಜಗಳ ತೆಗೆದ. ನಂಜುಂಡಯ್ಯ 'ನಾನು ನಿನ್ನ ಮಾತಾಡಿಸ ಲಿಲ್ಲ' ಎಂದದ್ದಕ್ಕೆ ರೋಫ್ ಮಾಡ್ತಿಯಾ ಅಂದು ಫಿಯಾಜ್ ಅವನನ್ನು ಸೆಲೂನಿಂದ ಈಚೆ ಎಳೆದು ಕೊಂಡು ಹಜಾಮನ ಚಾಕುವನ್ನೆ ತೆಗೆದುಕೊಂಡು ರಕ್ತ ಬರುವಂಗೆ ಹೊಡೆದಿದ್ದಾನೆ. ಅಲ್ಲೇ ಇದ್ದ ಮುಸ್ತಾಕ್ ಎಂಬುವನೂ ಫಿಯಾಜ್ ಜೊತೆ ಸೇರಿ ಕೊಂಡು ಹೀಗೆ ಮಾಡಿದ್ದಾರೆ. ತಮಾಶೆ ಅಂದರೆ ಪೋಲೀಸ್ ಸ್ಟೇಷನ್ನಿಗೂ ಸೆಲೂನಿಗೂ 50 ಅಡಿ ದೂರ ಆಗುತ್ತೆ. ನಂಜುಂಡಯ್ಯ ಅವರಿಂದ ಹೇಗೊ ಬಿಡಿಸಿಕೊಂಡು ಪೋಲಿಸ್ ಸ್ಟೇಷನ್ನಿಗೆ ಬಂದವರೇ ಎಲ್ಲ ವಿಷಯ ತಿಳಿಸಿದಾಗ ಇನ್ಸ್‌ಪೆಕ್ಟರವರು 'ಚವರ ಮಾಡಿಸ್ಕೊ ಹೋಗು ನಾವಿದ್ದೇವೆ' ಎಂದು ಭರವಸೆ ಕೊಟ್ಟ ಮೇಲೆ ಪುನಃ ನಂಜುಡಯ್ಯ ಸೆಲೂ ಕಡೆ ಹೋಗುತ್ತಿದ್ದಾಗ ಎಸ್. ಐ. ಎಲ್ಲ ಇವನನ್ನು ಗಮನಿಸುತ್ತಿದ್ದರೂ ಫಿಯಾಜ್ ಮತ್ತು ಆತನ ಸ್ನೇಹಿತರು ನಂಜುಂಡಯ್ಯನನ್ನು ಅಲ್ಲೆಲ್ಲ ಓಡಾಡಿಸಿಕೊಂಡು ಎಳೆದಾಡಿ ಹೊಡೆದಿದ್ದಾರೆ.

ಇದಾದಮೇಲೆ ಸಂಜುಂಡಯ್ಯನ ಸ್ನೇಹಿತರಾದ ಮಲ್ಲಿಕಾರ್ಜುನಸ್ವಾಮಿ ಮತ್ತಿತರರು ಎಸ್. ಐ. ಹತ್ತಿರ ಮಾತಾಡಿ ವಿಚಾರಣೆ ನಡೆಸಿ ಎಂದು ಕೇಳಿ ಕೊಂಡಿದ್ದಾರೆ. ಇದು ವಿಚಾರಣೆ ಆಗುತ್ತದೊ? ಅಥವಾ ಹಾಗೇ ಮುಚ್ಚಿ ಹೋಗುತ್ತದೊ?

10ನೇ ತಾರೀಖಿಗೆ ಬಂದರೆ ಅದೇ 6ನೇ ತಾರೀಖಿನ ಕತೆಯೇ. ಕಾಕಾ ಹೋಟೆಲಿಗೆ ನಾಕಾರು ಹರಿಜನ ಹೋಗಿ ಕಾಫಿ ಕೇಳಿದಾಗ ಆದೇ ಮಾತು;ನಿಮ್ಮ ಗ್ಲಾಸ್ ತಕ್ಕಳಿ. ಯಾಕೆ ಕೊಡಲ್ಲ ಅಂದ್ರೆ 'ಕೊಡಲ್ಲ' ಇದನ್ನೂ ಕೂಡ ಪೋಲೀಸ್‌ಗೆ ತಿಳಿಸಿದೆ. ಇವೆಲ್ಲಾ ವಿಚಾರಣೆ ನಡೆದು ಒಳ್ಳೆ ವಾತಾವರಣ ಉಂಟಾ ಗುತ್ತೋ ಇಲ್ಲವೋ ಎನ್ನುವುದು ಅಧಿಕಾರಿಗಳು ಯಾವ ರೀತಿ ಕ್ರಮ ತೆಗೆದುಕೊಳ್ಳುತ್ತಾರೆ ಎನ್ನುವು ದರ ಮೇಲೆ ನಿಂತಿದೆ.

ಇಲ್ಲಿ ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಮಲ್ಲಿಕಾರ್ಜುನ ಎಂಬ ಕ್ರಿಯಾಶೀಲನಾದ ಹರಿಜನ ವಿದ್ಯಾರ್ಥಿಯೇ ಇದಕ್ಕೆಲ್ಲ ಕಾರಣ ಎಂದು ಆತನ ಹಿಂದೆ ಯಾವಾಗಲೂ ಒಂದು ಗುಂಪು ಸುತ್ತುತ್ತಲಿ ಇದೆ. ಮಲ್ಲಿಕಾರ್ಜುನ ಮೈನಾರಿಟಿ ಕಮ್ಯುನಿಟಿ ಆಗಿರುವುದರಿಂದ ಆತನಿಗೆ ಇವರಿಂದ ಅಪಾಯ ಆಗುವ ಸಂಭವವೂ ಇದೆ.

ಇದೆಲ್ಲವನ್ನೂ ಮುಸ್ಲಿಮರು ಯೋಚಿಸಬೇಕಾಗಿದೆ. ಸವರ್ಣೀಯರು ಹರಿಜನರ ಬಗ್ಗೆ ನಡೆದುಕೊಳ್ಳುವ ರೀತಿಯನ್ನು ಇವರೂ ಅನುಸರಿಸಿದರೆ ಇವರ ಧರ್ಮ ದಲ್ಲಿ ಇಲ್ಲದ ಅಸ್ಪೃಶ್ಯತೆಯನ್ನು ಇವರು ಮಾಡಿ, ಕುರಾನಿಗೆ ಅಪಚಾರ ಮಾಡಿದಂತಾಗುತ್ತದೆ. ಇಂಡಿಯಾದಲ್ಲಿ ಹರಿಜನರು ಮತ್ತು ಮುಸ್ಲಿಮರಿಗೆ ಇರುವ ಬಹಳ ಸಮಸ್ಯೆಗಳು ಒಂದೇ ಆಗಿವೆ. ಅಂಥ ದರಲ್ಲಿ ಇವೆರಡು ಜನಾಂಗದವರೂ ಕೂಡಿಕೊಳ್ಳು ವುದು ಇಬ್ಬರಿಗೂ ಒಳ್ಳೆಯದು. ಹಿಂದೆ ನಡೆದ ಹಿಂದೂ ಮುಸ್ಲಿಂ ಗಲಾಟೆಗಳಲ್ಲೆಲ್ಲ ಹರಿಜನರು ಮುಸ್ಲಿಮರ ಕಡೆಯೇ ಇದ್ದರು ಎನ್ನುವಂಥದ್ದು ಕಂಡು ಹಿಂದುಗಳು ಹರಿಜನ ಮೇಲೆ ದೌರ್ಜನ್ಯ ನಡೆಸಿದಾಗ ಮುಸ್ಲಿಮರು ಹರಿಜನರ ಪರ ಸಹಜ ವಾಗೇ ಇರಬೇಕಾಗಿದ್ದು, ಈ ಮೇಲಿನ ಘಟನೆಗಳ ನೋಡಿದಾಗ ಹಾಗಾಗಿಲ್ಲ. ಇದರಿಂದ ಇಬ್ಬರಿಗೂ ಒಳ್ಳೆಯದಲ್ಲ. ಇದನ್ನು ತಿಳಿದು ಹರಿಜನ ಮತ್ತು ಮುಸ್ಲಿಮರು ಮುಂದಾದರೂ ಒಬ್ಬರಿಗೊಬ್ಬರು ಬೆಂಬಲಿಗರಾದರೆ ಎರಡು ಜನಾಂಗಕ್ಕೂ ಒಳ್ಳೆಯದು.

---

## ದಲಿತ ನುಡಿ

ಹೊಲೆಯ ಮಾದಿಗ ನೌಕರರೇ, ಕಣ್ಣು ತೆರೆಯಿರಿ ; ನಿಮ್ಮ ಓದು, ನಿಮ್ಮ ಉದ್ಯೋಗ, ನಿಮ್ಮ ಪದವಿಗಳು ಸಂಬಳಗಳು, ವಿನೋದಗಳು, ಔತಣಗಳು ಎಲ್ಲವೂ ನೀವು ಹುಟ್ಟಿ ಬೆಳೆದ ಹೊಲೆಮಾದಿಗರ ಕೇರಿಗಳ ಶ್ರಮಜೀವಿಗಳ ಆಶಾ ಪೂರಿತ ನೋಟಗಳ ಬಯಕೆಗಳೆ ಎಂಬ ಸತ್ಯವನ್ನು ಮರೆಯಬೇಡಿ. !

—ಬೋಯಿ ಭೀಮನ್ನ

---

# ಪ್ರತಿಕ್ರಿಯೆ

## ಪ್ರತಿಭೆಗೆ ಪುರಸ್ಕಾರ

'ಈ ದಲಿತ ಕೋಗಿಲೆಗಳ ಗುರ್ತಿಸುವವರಾರು' ಎಂಬ ತಲೆಬರಹದಡಿಯಲ್ಲಿ ಪ್ರಕಟವಾದ ಲೇಖನವನ್ನು ಓದಿ ತುಂಬ ಸಂತೋಷವಾಯಿತು. ಪ್ರತಿಭೆಯಿದ್ದು ಅದಕ್ಕೆ ತಕ್ಕ ಪುರಸ್ಕಾರ ದೊರೆಯದೆ ಹಾಳಾಗುತ್ತಿರುವ ಇಂದಿನ ದಲಿತ ಶಕ್ತಿಯನ್ನು ತಾವು ಹೀಗೆ ಬೆಳಕಿಗೆ ತರುವುದರ ಮೂಲಕವಾದರೂ ಅವರಿಗೆ ಒಂದು ಸ್ಥಾನವನ್ನು ದೊರ ಕಿಸಿ ಕೊಡುತ್ತಿದ್ದೀರಿ. ಇದಕ್ಕೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

ಇದರಂತೆಯೇ ಎಲ್ಲಾ ರಂಗಗಳಲ್ಲಿನ ಎಲ್ಲಾ ದಲಿತ ಪ್ರತಿಭಾವಂತರ ಪರಿಚಯವನ್ನು ಮಾಡಿಸಿ ಕೊಡಬೇ ಕೆಂದು ಈ ಮೂಲಕ ಅರಿಕೆ ಮಾಡಿಕೊಳ್ಳುತ್ತೇನೆ.

–ಪಾಪಣ್ಣ, ಕಣಗಾಲು
ಪಿರಿಯಾಪಟ್ಟಣ ತಾ|| ಮೈಸೂರು 8.

## ಉತ್ತಮ ಸಂಚಿಕೆ

15-5-76 ರ ಪಂಚಮದಲ್ಲಿ ವರದಿಯಾದ ಹಳೇಹಳ್ಳಿಯಲ್ಲಿನ ಹರಿಜನರ ಮೇಲಿನ ದೌರ್ಜನ್ಯ ನನ್ನ ಹೃದಯವನ್ನ ಹಿಂಡಿತು. ನರಸತ್ತವರಂತಿರುವ ದಲಿತ ಜನ ಇಂಥದನ್ನೆಲ್ಲ ಕಂಡು ಇನ್ನಾದರೂ ಎಚ್ಚೆತ್ತು-ಕೊಳ್ಳಲಿ. ಸರ್ಕಾರ ಈ ಬಗ್ಗೆ ತನಿಖೆ ನಡೆಸಿ ಸರಿಯಾದ ನ್ಯಾಯ ದೊರಕಿಸಿಕೊಡಲಿ.

ಸುಮಿತ್ರಾಬಾಯಿಯವರ ಲೇಖನದ ವಸ್ತು ಒಳ್ಳೆಯ-ದಾದರೂ ಎಲ್ಲೆಲ್ಲೋ ಹೋಗಿ ಏನೇನೋ ಆಗಿರುವಂತೆ ಗೊಂದಲಮಯವಾಗಿದೆ. ಕೃಷ್ಣಪ್ಪನವರು ಎಲ್ಲವನ್ನೂ ಹೇಳಲು ಹೋಗಿ ಏನೂ ಹೇಳಿಲ್ಲವೇನೋ ಎನಿಸುತ್ತದೆ

ಕಿಡಿಗೇಡಿಯ ಮಾತು ಕಿಡಿಕಿಡಿಯಾಗೇ ಇವೆ. ಕಮ್ಯು-ನಿಷ್ಟರ ನ್ಯಾರೋ ಮೈಂಡೆಡ್ ಬುದ್ದಿಗೆ ಇದೊಂದು ಚಿಕಿತ್ಸೆ. ಮುಂದೆ ಪಂಚಮ ಇನ್ನೂ ಚೆನ್ನಾಗಿ ಬರುತ್ತದೆ ಎಂದು ನಂಬಿರುತ್ತೇನೆ.

ಆರ್. ನಿರ್ಮಲಾ. ಅಶೋಕಪುರಂ.

---



# ದಲಿತರನೋವಿನಪ್ರತೀಕ ಸಾಹಿತಿ ಜಿ. ವೆಂಕಟಯ್ಯ

"ಸಾಹಿತ್ಯ ಕ್ಷೇತ್ರಕ್ಕೆ ಕಾಲಿಡುವಾಗಲೆ ಕೊಂಬು ಕಹಳೆ ತಮ್ಮಟೆ ಡೋಲುಗಳ ಶಬ್ದ ಅಬ್ಬರಗಳೊಡನೆ ಹೊರಡುವ ಪ್ರವೃತ್ತಿ ಕಳೆಯುತ್ತಿರುವ ಇಂದಿನ ದಿನಗಳಲ್ಲಿ ಸಹಜವಾಗಿಯೇ ಮೌನವಾಗಿ ಶ್ರಮಿಸುತ್ತಿರುವ ತೆರೆಮರೆಯ ಲೇಖಕರಲ್ಲಿ ಶ್ರೀ ಜಿ. ವೆಂಕಟಯ್ಯನವರೂ ಒಬ್ಬರಾಗಿದ್ದಾರೆ."

ಮುಖ ನೋಡಿದೊಡನೆ ವ್ಯಕ್ತಿಯ ಬಗ್ಗೆ ಆಸಕ್ತಿ ಕೆರಳಿಸುವ ದಲಿತ ಸಾಹಿತಿ ಶ್ರೀ ಜಿ. ವೆಂಕಟಯ್ಯನವರನ್ನು ಕುರಿತು ಲೇಖಕರೊಬ್ಬರು ಮೇಲಿನ ಮಾತುಗಳನ್ನು ಬರೆದಿದ್ದಾರೆ. ಅವರ ಈ ಮಾತುಗಳಿಂದಲೇ ವೆಂಕಟಯ್ಯನವರ ಜೀವನಕ್ಷೇತ್ರವನ್ನು ಅಳೆದುಬಿಡಬಹುದು.

ಇದೀಗತಾನೇ ರಾಜ್ಯಸಾಹಿತ್ಯಾಕಡಮಿ ಬಹುಮಾನ ಪಡೆದಿರುವ ಶ್ರೀಯುತರನ್ನು ಕಾಣಲು ಹೋದಾಗ ಪರಿಚಯವಿಲ್ಲದ ನಮ್ಮನ್ನು ಆದರದಿಂದ ಬರಮಾಡಿಕೊಂಡು ಸೌಜನ್ಯಶೀಲತೆಯಿಂದ, ಉತ್ಸಾಹದಿಂದ ಮಾತಾಡಿದರು. ಸಾಹಿತ್ಯದಲ್ಲಿ ಇದುವರೆಗೂ ಎಲೆಮರೆ ಕಾಯಾಗಿದ್ದು ಇದೀಗ ಬೆಳಕಿಗೆ ಬರುತ್ತಿರುವ ವೆಂಕಟಯ್ಯನವರು ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೋಕಿನ ಹೆಮ್ಮನಹಳ್ಳಿಯ ಹರಿಜನ ಬಡ ಕುಟುಂಬವೊಂದರಲ್ಲಿ 1916ರ ಏಪ್ರಿಲ್ 10ರಲ್ಲಿ ಜನಿಸಿದರು. ಅವಿದ್ಯಾವಂತ ತಂದೆತಾಯಿಯರು ಮಗನನ್ನು ಓದಿಸಿದರು. ಚಿಕ್ಕಂದಿನಲ್ಲಿಯೇ ಗಾಂಧಿಯವರೊಡನೆ ಸಂಪರ್ಕ ಬೆಳೆಸಿಕೊಂಡ ಈ ಹುಡುಗನಿಗೆ ಅವರ ಪ್ರಭಾವ ಅಪಾರ. ಈಗಲೂ ಅದನ್ನು ನೆನೆಸಿಕೊಂಡು "ಅದೊಂದು ಅಪೂರ್ವ ಸುಯೋಗ" ಎನ್ನುತ್ತಾರೆ.

ಬಡತನದಿಂದ ಹೊರಬರಲಾರದ ಇವರು ಓದಿದ್ದು ಬರೀ ಇಂಟರ್ ಮಿಡಿಯಟ್. ಹಣದ ಮುಗ್ಗಟ್ಟನ್ನು ಎದುರಿಸಲಾರದೆ ಅಕೌಂಟ್ ಸೂಪರಿಂಡೆಂಟ್ ನೌಕರಿ ಹಿಡಿದರು. ತಮ್ಮ ಜೀವನದಲ್ಲಿನ ಎಲ್ಲ ನೋವುಗಳನ್ನು ಮರೆಯಲು ಸಾಹಿತ್ಯ ರಚನೆಯಲ್ಲಿ ತೊಡಗಿದರು. ತಮ್ಮವೇ ಪುಸ್ತಕಗಳ ಪ್ರಕಟಣೆಗಾಗಿ ಅಗಲಿದ ಅವರ ಅರ್ಧಾಂಗಿಯವರ ಹೆಸರಲ್ಲಿ "ಲಕ್ಷ್ಮೀ ಸ್ಮಾರಕ ಗ್ರಂಥಮಾಲೆ" ಯೊಂದನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಇದುವರೆಗೆ ಸುಮಾರು ಹನ್ನೊಂದಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿರುವ ವೆಂಕಟಯ್ಯನವರು ಸಾಹಿತ್ಯ ಕ್ಷೇತ್ರದಲ್ಲಿ ಅನುಭವಿಸಿದ ಕಷ್ಟ ಅಪಾರ. 'ಪುಸ್ತಕಗಳು ಮಾರಾಟವಾಗೋದಿಲ್ಲ. ಎಲ್ಲದರಲ್ಲೂ ಜನ ಜಾತೀಯತೆಯನ್ನ ತಂದುಬಿಡುತ್ತಾರೆ' ಅಂತ ಕೊರಗುತ್ತಾರೆ.

ವಂಶಪಾರಂಪರ್ಯತೆಗಿಂತ ವ್ಯಕ್ತಿಯನ್ನು ತಿದ್ದಲು ಪರಿಸರವೇ ಮುಖ್ಯ ಎನ್ನುವ ಇವರನ್ನು ಹಿಂದೂ ಧರ್ಮದ ಬಗ್ಗೆ ಕೇಳಿದಾಗ "ನಮ್ಮನ್ನು ಕೀಳಾಗಿ ಕಾಣುವ ಆ ಧರ್ಮ ಯಾಕೆ?" ಎಂದು ಪ್ರಶ್ನಿಸುತ್ತಾರೆ. ದಲಿತರ ಸಂಘಟನೆ ಆಮೂಲಕ ಹೋರಾಟ ಆಗಬೇಕೆಂಬುದು ಇವರ ಹಂಬಲ. ಮಾಡುತ್ತೇವೆ ಎನ್ನುವವರಿಗೆ ಇವರ ಸಂಪೂರ್ಣ ಸಹಕಾರ, ಬೆಂಬಲ.

ದಲಿತನಾಗಿ ಹುಟ್ಟಿ ದಲಿತನಾಗೇ ಬೆಳೆದು ದಲಿತನಾಗೇ ಇನ್ನೂ ಜಾತಿಯ ಕಪಿಮುಷ್ಟಿಯಲ್ಲಿ ಸಿಕ್ಕಿ ನರಳುತ್ತಿರುವ ಇವರು "ತೀವ್ರವಾಗಿ ಬರೆಯಬೇಕು. ನಮಗೂ ಭಾವನೆಗಳಿವೆ ಎಂಬುದನ್ನು ತೋರಿಸಬೇಕು. ಎಷ್ಟು ಒರಟಾಗಿ ನೇರಾಗಿ ಬರೆದರೂ ಅವಕ್ಕೆ ಸಾಹಿತ್ಯದ ಮುಸುಕಿರಬೇಕು" ಎನ್ನುತ್ತಾರೆ.

'ಜಾತಿ ಬಡತನ ಎಲ್ಲದರ ಜೊತೆಗೆ ಅಸ್ತಮ ನನ್ನ ಜೀವವನ್ನು ಹಿಂಡುತ್ತಿದೆ' ಇದೀಗ ತಾನೆ ಅರವತ್ತರ ಗಡಿ ದಾಟಿರುವ ವೆಂಕಟಯ್ಯ ವ್ಯಥೆಯಿಂದ ಹೇಳುತ್ತಾರೆ: 'ತಮ್ಮನ್ನು ತೀರಾ ಅಧೋಗತಿಗೆ ತಳ್ಳುತ್ತಿರುವ ಹಿಂದೂ ಧರ್ಮದಿಂದ ನಮಗೇನು ಆಗಬೇಕು ಹೇಳಿ. ಅದಕ್ಕಾಗೆ ನನಗೀಗ ಮಾನವೀಯತೆಯನ್ನು ಹೇಳುವ ಬೌದ್ಧ ಧರ್ಮ ಇಷ್ಟವಾಗುತ್ತಿದೆ'. ತಮ್ಮ ಮನೆಗೆ 'ಗೌತಮ' ಎಂದು ಯಾಕೆ ಹೆಸರಿಟ್ಟಿದ್ದೀರಿ ಎಂದು ಕೇಳಿದ್ದಕ್ಕೆ ಅವರಿಂದ ಬಂದ ಉತ್ತರವಿದು..

ತೀರಾ ಸರಳ ಜೀವಿಯಾದ ವೆಂಕಟಯ್ಯನವರು ಸಾಮಾನ್ಯರಂತೆ ವರ್ತಿಸುತ್ತಾರೆ. ಸರಳವಾಗಿ ಯಾವ ದೊಡ್ಡಸ್ಥಿಕೆಯನ್ನು ಪ್ರದರ್ಶಿಸದೆ ಮಾತಾಡುತ್ತಾರೆ. "ನಮ್ಮ ಜನರಲ್ಲಿ ಪ್ರತಿಭೆ ಇದೆ. ಆದರೆ ಅದಕ್ಕೆ ಪುರಸ್ಕಾರವೇ ಇಲ್ಲ. ಬರಹಗಾರರಿಗೆ ಅವಕಾಶವಿಲ್ಲ ಏನು ಮಾಡೋದು ಹೇಳಿ" ಎಂದು ಅಸಹಾಯಕತೆಯನ್ನು ವ್ಯಕ್ತಪಡಿಸಿದರೂ ಅದರ ಬೆನ್ನಲ್ಲೇ "ಎಲ್ಲವನ್ನೂ ಮಾಡಬೇಕು" ಎಂಬ ಆಶಾಕಿರಣವನ್ನು ಬೀರುತ್ತಾರೆ.

---

ನ್ಯಾಯ, ಸಮಾನತೆ, ಮಾನವೀಯತೆ ಇವು ಮೂರು ಎಂದು ಹಿಂದೂ ಸಮಾಜದಿಂದ ಬಹಿಷ್ಕೃತವಾದುವೋ ಅಂದೇ ಪವಿತ್ರ ಭಾರತ ಭೂಮಿ ಪರಕೀಯರ ದುರಾಕ್ರಮಣಗಳಿಗೆ ಪಾದಾಕ್ರಾಂತವಾಗಿ ಹೋಯಿತು. ಪ್ರಜ್ಞೆ, ಪ್ರತಿಭೆ, ವೈಭವಗಳನ್ನು ಕಳೆದುಕೊಂಡಿತು. ಗುಲಾಮಗಿರಿಗೆ ಸಹಜವಾದ ನೀಚದುರಾಂಕಾರವನ್ನು, ಪೈಶಾಚಿಕ ಜಾತೀಯತೆಯನ್ನು ಮೈಗೂಡಿಸಿಕೊಂಡಿತು. ಮಾನವನ್ನು, ಮಾನವೀಯತೆಯನ್ನು ಕ್ಷಣಿಕವಾದ ಸ್ವಪ್ರಯೋಜನಗಳಿಗಾಗಿ ಮಾರಿಕೊಂಡಿತು.

(ದಲಿತ ಕೈಪಿಡಿ) —ಬೋಯಿಭೀಮನ್ನ

# ಎರಡು ಪದ್ಯಗಳು

## ೧. ಗೊಂಬೆಗಳು

ನಿಯತ್ತಿನ ಎರಕ ಹೊಯ್ದು
ಕಡೆದ ಕೀಯಿಲ್ಲದೆ ದುಡಿವ
ಸ್ಪರ್ಶಿಸದೆ ಮಿಡಿವ
'೧' ಡಿಗ್ರಿಯಲ್ಲೂ ಕರಗಿ
ನೀರಾಗಿ ಮಾಗಿಯ
ಮಂಜಾಗುವ ದನಿ ಸತ್ತ
ಗೊಂಬೆಗಳು.
ಹಸಿವಲ್ಲೂ ತೇಗುತ್ತವೆ.
ಆಗೀಗ ಊಳಿಗದ ಗೂನು,
ಮೇನಾ ಹೊತ್ತು ಹರಿದ
ಹೆಗಲ ತೊಗಲು ಸವರಿ
ಖುಷಾಲಾಗಿ ಖೊಳಖೊಳ
ನಗುತ್ತವೆ ಎಂಥ ನೋವಲ್ಲೂ.
ಎದೆ ಮುಟ್ಟಿ ಹೇಳುತ್ತವೆ
"ಖಂಡವಿದುಕೋ ಮಾಂಸವಿದುಕೋ"
ಹಿಡಿ ಕೂಳಿಗೆ, ಗಜ ನೆರಳಿಗೆ
ಕಣ್ಣಲ್ಲೇ ಜೀವ ಹಿಡಕೊಂಡು
ನುಡಿಯುತ್ತವೆ ಕೊನೆವರಗೂ.

ಮುನಿರತ್ನಮ್ಮ ಗಂಜಿಗುಂಟೆ

## ೨. ಸುಲಿಗೆ

ದಿನವೆಲ್ಲಾ ದುಡಿದ ದೂಮ
ಸಂಜೆ ಏಳಕ್ಕೆ ಮೂರು ರೂಪಾಯಿ
ತೂತು ತೋರ್ತಲ್ಲಿ ಸಿಕ್ಕಿ ಹೊರಟಾಗ
ಮನೆಯೊಡಯ ಉದ್ದಿನ ದೋಸೆ
ಮುಕ್ಕುತ್ತಾನೆ.

ಗಡಂಗಲ್ಲಿ ಎರಡು ರೂಪಾಯಿಗೆ
ಕೊಟ್ಟ ಸರಾಯಿಯಲ್ಲರ್ಧ ನೀರು.

ನಡೆಯುತ್ತ ಮನೆ ಸೇರಿದ.
ರೋಗಿಷ್ಟ ಹೆಂಡತಿಗೆ ಬೈದ.
ಮಕ್ಕಳಿಗೆ ಹೊಡೆದ.

ಮಲಗಿದವನಿಗೆ ಕನಸು.

ಎಸ್. ಆರ್. ವಿಜಯಶಂಕರ

# ಮಲಿಯೂರಿನಲ್ಲಿ ಅಸ್ಪೃಶ್ಯತೆ ಪ್ರಶ್ನಿಸಿದ್ದಕ್ಕೆ ದಬ್ಬಾಳಿಕೆ: ಅ

‘...ಬಿಸಿಲಿಗೆ ಸುಸ್ತಾಗಿತ್ತು. ತೆರೆದಿದ್ದ ಒಂದು ಹೋಟೆಲೊಳಕ್ಕೆ ಹೋಗಿ ಕೂತು:

‘ಎಂಟು ಕಾಫಿ ತನ್ರಿ’

ಅಕ್ಕಪಕ್ಕದವರ ಜೊತೆ ಮಾತಾಯಿತು. ಪಕ್ಕದವರೊಬ್ಬರು : ‘ನೀವೆಲ್ಲ ಯಾವೂರವ್ರು’ ಕೇಳಿದರು.

‘ಸಿದ್ಧನಹುಂಡಿ. ಯಾಕೆ?’

ಕೇಳಿದವರು ಮುಂದೆ ಮಾತಾಡಲೇ ಇಲ್ಲ. ಒಂದು ತರ ಮುಖ ಮಾಡಿಕೊಂಡು ಕೆಂಗಣ್ಣು ಬಿಡುತ್ತಾ ಎದ್ದು ಹೊರಗೆ ಹೋದರು. ಹಾಡುತ್ತಿದ್ದ ರೇಡಿಯೊ ನಿಂತು ಹೋಯಿತು. ಕಾಫಿ ಕುಡಿಯುತ್ತಿದ್ದವರೆಲ್ಲ ಗುಸುಗುಸು ಮಾಡುತ್ತಾ ಎದ್ದು ಹೊರಗೆ ಹೋದರು. ಅರ್ಥವಾಗಲಿಲ್ಲ. ಹೋಗಿದ್ದ ನಾವೆಂಟು ಜನರು ಮಾತ್ರ ಉಳಿದುಕೊಂಡೆವು. (ಸಿದ್ದನಹುಂಡಿಯಲ್ಲಿರುವವರು ಬರೀ ಹರಿಜನರು ಎನ್ನುವುದು ಅವರಿಗೆ ಗೊತ್ತಿತ್ತು). ಕಾಫಿಗೆ ಹೇಳಿ ಕಾಲು ಗಂಟೆಯಾಯ್ತು. ಅರ್ಧ ಗಂಟೆಯಾಗುತ್ತಾ ಬಂತು. ಕಾಫಿ ಬರಲಿಲ್ಲ. ಸಪ್ಲೈ ಮಾಡುತ್ತಿದ್ದವರು ಹೊರಗೆ ಬರಲಿಲ್ಲ.

‘ರೀ ಸ್ವಾಮಿ ಸ್ವಲ್ಪ ಜಲ್ದಿ ಕಾಫಿ ಕೊಡ್ತಿರಾ.’?

ಕೋಣೆಯಿಂದ ಉತ್ತರವೇ ಬರಲಿಲ್ಲ.

‘ರೀ... ಕೊಡ್ತಿರೊ ಇಲ್ಲೊ.?’

ಕೊನೆಗೆ ಇದಕ್ಕೆ ಉತ್ತರವಾಗಿ:

‘ನಿಮಗೆ ಕೊಡಲ್ಲ... ಎದ್ದೋಗಿ ಹೊರಕ್ಕೆ.’

‘ಯಾಕೆ?...ಯಾಕೆ??’

ಗಲಾಟೆಯಾಯ್ತು. ದಪ್ಪದಪ್ಪ ಮೀಸೆಯ ಒಂದಷ್ಟು ಜನ ಒಳಕ್ಕೆ ನುಗ್ಗಿದರು. ‘ಏನ್ರೊ ಗಲಾಟೆ ಮಾಡದು.. ಏನಧಿಕಾರ ಇದೆ ನಿಮಗೆ... ನಿಮಗೆ ಕೊಬ್ಬು ಹೆಚ್ಚಾಗ್ಬಿಟ್ಟಿದೆ...’ ಈ ಎಂಟು ಜನರ ನೂಕಿ ಹೊರಗೆ ಹಾಕಿದರು. ಹೋಟೆಲ್ ಬಾಗಿಲು ಮುಚ್ಚಿಕೊಂಡಿತು. ಕಾಫಿ ಸಿಕ್ಕಲಿಲ್ಲ. ನೀರೂ ಸಹ.

ಎಮರ್ಜನ್ಸಿಯಲ್ಲೂ.... ಹಿಂಗೆ....!

ಸಿದ್ಧನಹುಂಡಿಯ ಯುವಕ ಸಂಘದ ಈ ಎಂಟು ಜನ ವಿದ್ಯಾರ್ಥಿಗಳಿಗೆ ಆಶ್ಚರ್ಯ. ಎಲ್ಲರೂ ಹೋಗಿದ್ದದು ಕ್ಲೀನಾದ ಪ್ಯಾಂಟು ಷರ್ಟುಗಳ ಹಾಕಿಕೊಂಡೇ. ಅದೂ ಎಮರ್ಜನ್ಸಿ ಇರುವಾಗ, ಇಂದಿರಾ ಗಾಂಧಿಯವರ ಇಪ್ಪತ್ತು ಅಂಶಗಳ ಕಾರ್ಯಕ್ರಮ ಎಲ್ಲಾ ಕಡೆಯೂ ಬಿಗಿಯಾಗಿ ನಡೆಯುತ್ತಿವೆ ಎನ್ನುತ್ತಿರುವ ಈಗ ಹೀಗಾದುದು ಖಂಡಿತಾ ಆಶ್ಚರ್ಯ. ಸಿದ್ದನಹುಂಡಿಯಿಂದ ಇವರು ಹೋಗಿದ್ದುದೂ ಇದಕ್ಕಾಗಿಯೇ : ಯುವಕ ಸಂಘದ ಇತ್ತೀಚಿನ ಕೆಲಸಗಳಂತೆ ಅಕ್ಕಪಕ್ಕದ ಊರುಗಳಿಗೆ ಭೇಟಿ ಕೊಡುವುದು, ಕಷ್ಟಸುಖ ವಿಚಾರಿಸುವುದು.ಸರ್ವೆ ಮಾಡುವುದು ಇತ್ಯಾದಿ. ಈ ಮೂಲಕ ಕೈಲಾದಷ್ಟು ಇಂದಿರಾ ಗಾಂಧಿಯವರ ಆರ್ಥಿಕ ಕಾರ್ಯಕ್ರಮವನ್ನು ಪ್ರಚಾರ ಮಾಡುವುದು.

ಅಂತೆಯೇ ಇಂದು (ತಾ॥ 30.5.75) ಒಂದೇ ತಾಲೋಕಿನ (ಟಿ. ನರಸೀಪುರ) ಹತ್ತಿರದ ಊರಾದ ಮಲಿಯೂರಿಗೆ ಭೇಟಿ ಇತ್ತಿದ್ದರು. ಮಲಿಯೂರಿನ ಹರಿಜನ ಕೇರಿಯ ಪ್ರತಿಯೊಂದು ಮನೆಗೆ ಭೇಟಿ
ಜೀತದ ಬಗ್ಗೆ, ತೊರಕುತ್ತಿರುವ ಸಾಲದ ಬಗ್ಗೆ,
ಗಳ ಬಗ್ಗೆ, ವೃದ್ಧಾಪ್ಯವೇತನದ ಬಗ್ಗೆ, ಅಸ್ಪೃಶ
ಬಗ್ಗೆ... ಹೀಗೆ ಎಲ್ಲಾ ವಿಚಾರಿಸಿ, ತಿಳಿಸಿ ಹೇಳಿ
ಸುವಷ್ಟರಲ್ಲಿ ಮಧ್ಯಾಹ್ನ 3ಗಂಟೆಯಾಗಿತ್ತು. ಸ
ಆಗಿತ್ತು. ಕಾಫಿ ಕುಡಿಯೋಣವೆಂದು ಹೊರ
ಈಗಲೇ. ಆದರೆ ಕಾಫಿ ಸಿಗಲಿಲ್ಲ. ನೀರೂ ಸಿ
ಬದಲಿಗೆ ಹೊರಕ್ಕೆ ನೂಕಿಸಿಕೊಳ್ಳಬೇಕಾಯ್ತು.
ರ್ಜನ್ಸಿಯ ಸರ್ಕಾರದ ಬಿಗಿ ಕ್ರಮದೊಳಗೂ ಹೀ
ತ್ತಲ್ಲ ಎಂದು ಆಶ್ಚರ್ಯ ಪಡಬೇಕಾಯ್ತು.

ನ್ಯಾಯ ಸಿಕ್ಕುವುದು ಎಲ್ಲಿಂದ? ಯಾರಿಂದ?

ಈ ಘಟನೆ ಬಗ್ಗೆ ಅಂದೇ (ತಾ॥30.5.76)
ಯೂರಿನ ಪಕ್ಕದಲ್ಲಿರುವ ಬನ್ನೂರಿನ ಪೋಲೀಸ್
ನ್‌ನಲ್ಲಿ ಕಂಪ್ಲೈಂಟ್ ಕೊಟ್ರು, ಈ ಊರಿನಲ್ಲಿ ಅ
ಶ್ಯತೆ ನಡೆಸುತ್ತಿರುವುದರ ಬಗ್ಗೆ ಸ್ಥಳದಲ್ಲಿ ತನಿಖೆ ವ
ಆಯ್ತು. ಖಂಡಿತಾ ಕ್ರಮ ತೆಗೆದುಕೊಳ್ಳುತ್ತೇವೆ
ಆಶ್ವಾಸನೆಯೂ ಸಿಕ್ಕಿತು. ಕೇಸನ್ನ ರಿಜಿಸ್ಟರ್ ಮ
ಯೂ ಆಯ್ತು. ಬನ್ನೂರಿನ ಪಕ್ಕದ ಯಾಚೇನ
ಯಲ್ಲಿ ಆದ ಘಟನೆ ನೆನೆದು ಮುನ್ನೆಚ್ಚರಿಕ
ತಾಲ್ಲೂಕಿನ ಬಿ.ಡಿ.ಒ, ತಹಸಿಲ್ದಾರ್ ಮತ್ತು ಜಿ
ಕಾರಿ ಇವರುಗಳಿಗೆ ಈ ಘಟನೆ ಬಗ್ಗೆ ಕ್ರಮ ತ
ಕೊಳ್ಳುವಂತೆ ಬರೆದು, ಖುದ್ದಾಗಿ ತಿಳಿಸಿ, ಒತ್ತಾ
ಆಗಿದೆ. ಆದರೆ ಕ್ರಮ ತೆಗೆದುಕೊಳ್ಳುವ ಸೂಚನ

# ದಲಿತರಿಗಾಗಿ ವಿಶೇಷ ಪೋಲಿಸ್ ದಳ ಎಲ್ಲಿ?

ಇತ್ತೀಚೆಗೆ ಕರ್ನಾಟಕದ ಗ್ರಾಮಾಂತರ ಪ್ರದೇಶಗಳಲ್ಲಿ ದಲಿತರ ಮೇಲೆ ದೌರ್ಜನ್ಯ ಹೆಚ್ಚುತ್ತಿವೆ. ಈ ದೌರ್ಜನ್ಯಗಳ ಹಿನ್ನೆಲೆಯನ್ನು ಅವಲೋಕಿಸಿದಲ್ಲಿ ಇದಕ್ಕೆ ಕಾರಣ ಸರ್ಕಾರದ ಇತ್ತೀಚಿನ ಕ್ರಾಂತಿಕಾರಿ ಸುಧಾರಣೆಗಳಾದ, ಭೂ ಸುಧಾರಣೆ, ಜೀತಗಾರಿಕೆ, ಋಣ ಪರಿಹಾರ ಕಾನೂನುಗಳು ಮುಖ್ಯ ಕಾರಣವಾಗಿದೆ. ಕರ್ನಾಟಕದ ಗ್ರಾಮೀಣ ಸಮಾಜವನ್ನು ಹತೋಟಿಯಲ್ಲಿಟ್ಟುಕೊಂಡಿರುವ ಜಮೀನುದಾರಿ ಸವರ್ಣ ಹಿಂದುಗಳ ಭೂ ಸುಧಾರಣೆಯಂತಹ ಕಾನೂನಿನಿಂದ ದಲಿತನ ಸ್ವಂತ ಭೂ ಒಡೆತನವನ್ನು ಸಹಿಸದಿದ್ದಾರೆ. (ಉದಾ:– ಬೆಂಗಳೂರು ಜಿಲ್ಲೆಯ ದಕ್ಷಿಣ ತಾಲ್ಲೂಕಿನ ತಿಮ್ಮಾಭೋವಿ ಪ್ರಕರಣ) ಅಲ್ಲದೆ ಇದುವರೆವಿಗೂ ಸವರ್ಣ ಹಿಂದೂಗಳ ಮನೆಯಲ್ಲಿ ಜೀತಮಾಡುತ್ತಾ ದನಗಳಂತೆ ಬದುಕುತ್ತಿದ್ದು, ದಲಿತ ಈವಾಗ ಸ್ವತಂತ್ರ ಪೌರನಾಗಿಬಾಳಲು ಅವಕಾಶ ಮಾಡಿಕೊಟ್ಟದ್ದು ಸವರ್ಣೀಯರ ಕೋಪಕ್ಕೆ ಕಾರಣವಾಗಿವೆ. (ಉದಾ :– ಯಾಚೇನಹಳ್ಳಿ ಪ್ರಕರಣ) ಭಾರತ ದೇಶದ ಗ್ರಾಮಾಂತರ ಪ್ರದೇಶಗಳಲ್ಲಿ ದಲಿತನ ಮೇಲಿನ ದೌರ್ಜನ್ಯಗಳು ಬಹಳಷ್ಟು ಬೆಳಕಿಗೆ ಬಾರದೆ ಮುಚ್ಚಿ ಹೋಗುತ್ತಿವೆ. ದಲಿತ ಬಲಿಷ್ಠನಾಗಿದ್ದು, ಪೋಲೀಸ್ ಠಾಣೆ ಹತ್ತಿರದಲ್ಲಿದ್ದರೆ ಮಾತ್ರ ಕೆಲವು ಪ್ರಕರಣಗಳು ಬೆಳಕಿಗೆ ಬರುತ್ತವೆ. ಈ ಪ್ರಕರಣಗಳನ್ನು ಮುಚ್ಚುತ್ತಿರಲು ಕಾರಣ ಹಳ್ಳಿಯ ಜಮೀನ್ದಾರರು ಪಟೇಲರು, ಯಜಮಾನರಿರುತ್ತಾರೆ. ಇವರ ಮಾತನ್ನೇನಾದರೂ ಮೀರಿ ಪೋಲೀಸರಿಗೆ ದೂರು ಕೊಟ್ಟಲ್ಲಿ ಊರಿನಲ್ಲಿ ಸಾಮಾಜಿಕ ಬಹಿಷ್ಕಾರ, ಕೂಲಿಗೆ ಕರೆಯುವುದಿಲ್ಲ. ಅಂಗಡಿಗಳಲ್ಲಿ ಸಾಮಾನುಗಳನ್ನು ಕೊಡುವುದಿಲ್ಲ. ಕೊನೆಗೆ ಛಡಿ ಏಟು, ಗುಡಿಸಲಿಗೆ ಬೆಂಕಿ, ದಂಡ ವಸೂಲಿ ಮಾಡುತ್ತಾರೆ. ಇಷ್ಟೆಲ್ಲಾ ಕ್ರೂರ ದಬ್ಬಾಳಿಕೆ ನೆಡೆಸುವ ಸವರ್ಣೀಯರ ಮೇಲೆ ದೂರು ನೀಡಿದ್ದಲ್ಲಿ ಅಲ್ಲೂ ಪೋಲೀಸರಿಂದ ದಲಿತನಿಗೆ ಶಿಕ್ಷೆ ಯಾಗುತ್ತದೆ. ಇದಕ್ಕೆ ಕಾರಣವಿಷ್ಟೆ. ಮೊದಲೇ ಆರ್ಥಿಕವಾಗಿ ಮುಂದುವರಿದ ಸವರ್ಣೀಯ ಸಾಕಷ್ಟು ಸಾಕ್ಷಿಯನ್ನು ಹೊಂದಿದ್ದು ಇಡೀ ದೌರ್ಜನ್ಯ ಪ್ರಕರಣವನ್ನೇ ಬುಡಮೇಲು ಮಾಡಿ ತನ್ನ ತಪ್ಪನ್ನು ಮತ್ತೆ ದಲಿತನ ಮೇಲೆ ಹೇರುತ್ತಾನೆ. ಅಲ್ಲದೆ ಇತ್ತೀಚಿನ ಕೆಲವು ಅನುಭವಗಳನ್ನು ಹೇಳಬೇಕಾದರೆ ಮೊದಲೇ ಸವರ್ಣೀಯನಾದ ಅಧಿಕಾರಿ ಸ್ಥಳೀಯ ರಾಜಕೀಯಕ್ಕೆ ಬಲಿಯಾಗಿ ಇಡೀ ಪ್ರಕರಣವನ್ನೇ ತನಿಖೆಮಾಡದೆ ತಾನೆ ನ್ಯಾಯಾಧಿಪತಿಯಾಗಿ ತೀರ್ಪುನೀಡಿ ದಲಿತನನ್ನೇ ಬೆದರಿಸಿ ಇನ್ನೊಮ್ಮೆ ಅವರ ಗೋಜಿಗೆ ಹೋಗದಂತೆ ಹೇಳಿ ಕಳುಹಿಸುತ್ತಾನೆ.

ಮೊದಲೇ ಅನಕ್ಷರಸ್ತ ಹಾಗೂ ಆರ್ಥಿಕವಾಗಿ
ರಾಗಿರುವ ಹರಿಜನರು ಉನ್ನತ ಪೋಲೀಸ್ ಅ
ಗಳಿಗೆ ದೂರು ನೀಡಲಾರದೆ, ನೀಡಿದ್ದರೂ ಸರಿ
ಸಾಕ್ಷಿಯನ್ನು ಒದಗಿಸಲಾರದೆ ಸದಾ ಅನ್ಯಾಯಕ
ಯಾಗುತ್ತಿರುತ್ತಾರೆ.

ಕಳೆದವರ್ಷ ಕರ್ನಾಟಕ ರಾಜ್ಯದ ಸಮಾಜ ಕ
ಇಲಾಖೆ ದಲಿತರ ರಕ್ಷಣೆ ಮತ್ತು ಸವರ್ಣೀಯರ ದ
ತಡೆಯಲು ಪ್ರತ್ಯೇಕ ಪೋಲೀಸ್ ಪಡೆಯನ್ನು ರ
ಸ್ವಾಗತಾರ್ಹ, ಆದರೆ ಪ್ರತ್ಯೇಕ ಪೋಲೀಸ್
ಕಛೇರಿಯು ಬೆಂಗಳೂರು ನಗರದಲ್ಲೇ ಉಳಿದುಕ
ಆಗಾಗ್ಗೆ ಒಂದೊಂದು ಪತ್ರಿಕಾ ಹೇಳಿಕೆಯು
ತ್ತಿವೆಯಷ್ಟೆ. ದಲಿತರ ಮೇಲೆ ದೌರ್ಜನ್ಯಗಳು ಎಲ್ಲೆ
ಬರುತ್ತಿರುವಾಗ ಇನ್ನಾದರೂ ಈ ಪೋಲೀಸ್
ಈ ಕೆಳಕಂಡ ಮಾರ್ಪಾಡುಗಳನ್ನು ಮಾಡ
ಈ ದಳದ ಮೂಲ ಉದ್ದೇಶವೇ ವಿಫಲವಾಗುತ್ತದ

1. ಜಿಲ್ಲಾ ಮಟ್ಟದಲ್ಲಿ ವಿಶೇಷ ದಳದ ಠಾಣೆ
ತೆರೆಯಬೇಕು. ಅಲ್ಲಿ ಒಬ್ಬ ಸಬ್‌ಇನ್ಸ್‌ಪೆಕ್ಟರ್ ತ
ಕಿಗೆ ಎರಡು ಪೋಲೀಸ್ ಪೇದೆಗಳನ್ನು ಹೊಂದಿರ
ಪ್ರತಿತಿಂಗಳು ಆಯಾ ತಾಲ್ಲೂಕಿನ ಪೇದೆ ದಲಿತನ
ನ್ಯದ ಬಗ್ಗೆ ವರದಿ ಮಾಡಬೇಕು. ವಿಶೇಷದಳದ

# ...ರಿಗಳ ಮೌನ

**ವಿಶೇಷ ವರದಿ**

...ವರೆಗೂ ಬಂದಿಲ್ಲ. ಆದರೆ ಈ ಘಟನೆ ಅನುಸರಿಸಿ ...ಯೂರಿನ ಹರಿಜನರ ಮೇಲೆ ಇದುವರೆಗೆ ಆಗಿರುವ ...ನ್ನು ಮತ್ತು ಊರ ಸುತ್ತ ಮುತ್ತ ಆಗಿರುವ ...ಟ್ಟನ್ನು ಗಮನಿಸಿದರೆ ಹರಿಜನರಿಗೆ ಯಾರಿಂದ ...ದ ನ್ಯಾಯ ದೊರಕಬೇಕು ಎನ್ನುವುದೇ ಅರ್ಥ ...ವುದಿಲ್ಲ.

...ರ್ಣೀಯರ ಮಧ್ಯೆ ಮಲಿಯೂರ ಹರಿಜನರು

...ಯೂರಿನಲ್ಲಿರುವ ಸವರ್ಣೀಯರ ಮತ್ತು ಹರಿಜನರ ... ಮನೆಗಳ ಸಂಖ್ಯೆ 245. ಇಷ್ಟರಲ್ಲಿ ಹರಿಜನರದೇ ... ಜನಸಂಖ್ಯೆಯಲ್ಲೂ ಅಷ್ಟೇ ಹರಿಜನರದೇ ಮೇ-... ಆದರೆ ದಬ್ಬಾಳಿಕೆ, ಧೀನತೆ, ಬಡತನ ಇವು ...ವುದರಿಂದಲು ಹರಿಜನರು ಸವರ್ಣೀಯರಹಿಡಿತದಿಂದ ...ಕೊಂಡಿಲ್ಲ. 20 ಕುಂಟೆಯಿಂದ ಸುಮಾರು 4 ಎಕರೆ ... ಜಮೀನು ಹೊಂದಿರುವ ಶೇ.50 ರಷ್ಟು ಹರಿಜನ ...ಮ್ಮ ಜಮೀನನ್ನೆಲ್ಲ ಆಕ್ಕಪಕ್ಕದ ಊರುಗಳ ...ಜ್ಞಾತಿಯವರಿಗೆ ಬೋಗ್ಯಕ್ಕೆ ಹಾಕಿ ಕೈಕಟ್ಟಿ ಕುಳಿತಿ...ರು. ಸರ್ಕಾರದ ಕ್ರಮದಿಂದ ಇತ್ತೀಚೆಗೆ ಇದು ...ಷ್ಟು ಸಡಿಲ ಆಗಿದ್ದರೂ ಇನ್ನೂ ಬಹಳಷ್ಟು ... ಬೋಗ್ಯ ಆಕಿದ್ದ ಜಮೀನನ್ನು ವಾಪಸ್ಸು ...ಲ್ಲ. ಜಮೀನು ಕೇಳಿ ಮೇಲ್ಜಾತಿಯವರ ಎದುರು ...ಕೊಳ್ಳುವುದಕ್ಕೆ 'ನಮಗೆ ಹೆದರಿಕೆ' ಎನ್ನುತ್ತಾರೆ. ...ಂದೇ ಬದುಕುತ್ತಿದ್ದ ಸುಮಾರು 90 ಮನೆಗಳಲ್ಲಿ ...ೂ ಜೀತದಿಂದ ಬಿಡಿಸಿಕೊಂಡಿದ್ದಾರೆ ಎನ್ನುವಂತಿಲ್ಲ ಬೇರೆಯವರಿಗೆ ತಿಳಿಸದೆ, ಬೇರೆ ಉಪಾಯವಿಲ್ಲದೆ ಒಳಗೆ ಜೀತ ಮಾಡುವ ಮನೆಗಳು ಇನ್ನೂ ಇವೆ. ಜೀತದಿಂದ ಬಿಡಿಸಿಕೊಂಡವರು ಖಾಲಿ ಕೈಯಾಗಿ ಕೂತಿದ್ದಾರೆ. 'ಜೀತ ಮುಕ್ತರಿಗೆ ಪರಿಹಾರ' ಇಲ್ಲಿ ಒಬ್ಬರಿಗೂ ಸಿಕ್ಕಿಲ್ಲ ತಿರುಗಾಡಲಾಗದ ವಯಸ್ಸಾದ ಕಣ್ಣು ಮಂಜಾದ ಮುದುಕ ಮುದುಕಿಯರು ಕಣ್ಣೀರಿಡುತ್ತಾ 'ನಮಗೆ ದಿಕ್ಕು ದೆಸೆ ಯಾರೂ ಇಲ್ಲ ಸ್ವಾಮಿ' ಎಂದು ಗೋಗರೆಯುತ್ತಾರೆ. ಇಂಥ ಬಹಳಷ್ಟು ಜನಕ್ಕೆ ಗ್ರಾಮಸೇವಕ ಯಾರು ಅನ್ನುವುದೇ ಗೊತ್ತಿಲ್ಲ

ಮಲಿಯೂರಿನಲ್ಲಿ ಅಸ್ಪೃಶ್ಯತೆಯದೇ ಒಂದು ಮುಖ. 'ನಮ್ಮ ತಾತನ ಕಾಲದಿಂದಲೂ ಹೀಗೇ ಸ್ವಾಮಿ' ಎನ್ನುವ ಹರಿಜನರು ಈ ಬಗ್ಗೆ ಮೇಲ್ಜಾತಿಯವರ ದಬ್ಬಾಳಿಕೆಯನ್ನು ಪ್ರಶ್ನಿಸಿಯೇ ಇಲ್ಲ. ಈ ಊರಲ್ಲಿ ಇರುವ ಹೋಟೆಲು ಅಂಗಡಿಗಳೆಲ್ಲ ಮೇಲ್ಜಾತಿಯವರವೆ. ಇರುವ ಮೂರು ಹೋಟೆಲುಗಳಲ್ಲಿ ಹರಿಜನರು ಅಪ್ಪಿ ತಪ್ಪಿಯೂ ಒಳಗೆ ಹೋಗುವಂತಿಲ್ಲ. ಇಲ್ಲಿನ ಹರಿಜನರು ಇದುವರೆಗೆ ಹಾಗೆ ಮಾಡಿಯೂ ಇಲ್ಲ. ಹೋಟೆಲ ಹೊರಗಡೆ ಬಿಸಾಕಿರುವ ಲೋಟಗಳ ತೊಳಕೊಂಡು ಮೇಲಿಂದ ಉಯ್ಯುವ ಕಾಫಿಯನ್ನು ಕುಡಿದು ಅಭ್ಯಾಸವಾಗಿಹೋಗಿದೆ. ಇದೊಂದು ಖುಷಿಯ ವಿಷಯ ಸವರ್ಣೀಯನಿಗೆ ?!

ಇಂಥ ಸವರ್ಣೀಯಕ್ಕೆ ಸಿದ್ದನಹುಂಡಿಯ ಯುವಕ ಸಂಘದ ವಿದ್ಯಾರ್ಥಿಗಳು ಹೋಟೆಲು ನುಗ್ಗಿದುದು ಇಲ್ಲಿನ ಹರಿಜನರಿಗೆ ಇಕ್ಕಟ್ಟಾಗಿಬಿಟ್ಟಿದೆ. ಮೊದಲೇ ಕೆಂಗಣ್ಣು ಬಿಡುತ್ತಿದ್ದ ಸವರ್ಣೀಯರೆಲ್ಲ ಈ ಘಟನೆಯನಂತರ ಹರಿಜನರ ಪೀಡಿಸಲು ಹತ್ತಿದ್ದಾರೆ. ಅಲ್ಲದೆ ಘಟನೆಯನ್ನು ವಿಕೃತಗೊಳಿಸಿ ಸಿದ್ದನಹುಂಡಿಯ ಹುಡುಗರ ಮೇಲೆ ಮತ್ತು ಈ ಪುಡುಗರ ಜೊತೆ ಸಹಕರಿಸಿದ ಮಲಿಯೂರಿನ ಒಬ್ಬ ವಿದ್ಯಾರ್ಥಿಯ ಮೇಲೆ ಹೋಟೆಲು ನುಗ್ಗಿ ಲೂಟಿ ಮಾಡಿದರೆಂದು ಅಧಿಕಾರಿಗಳಿಗೆ ದೂರಿತ್ತಿದ್ದಾರೆ. ಈಗ ಮುಚ್ಚಿದ ಹೋಟೆಲುಗಳ ತೆರೆದಿಲ್ಲ. ತೆರೆದರೂ ಹಿಂದುಗಡೆಯಿಂದ ಅವರ ಜಾತಿಯವರಿಗಷ್ಟೇ ಸೇವನೆ. ಈ ಮಧ್ಯೆ ಹರಿಜರಿಗೆ ಪೀಕಲಾಟ. ಚೂರುಪಾರ ಸಿಕ್ಕುತ್ತಿದ್ದ ಕೂಲಿಯೂ ಈಗ ನಿಂತು ಹೋಗಿದೆ. ಸಿಕ್ಕುತ್ತಿದ್ದ ಕೈಸಾಲ ನಿಂತು ಹೋಗಿದೆ. ಅಸುಮಕ್ಕಳಿಗೆ ರೋಗಿಗಳಿಗೆಂದರೂ ಹಾಲು ಕಾಫಿ ಸಿಕ್ಕುವುದಿಲ್ಲ. 'ಸಿದ್ನುಂಡಿ ಪುಂಡರ್‌ತವು ಹೀಸ್ಕಹೋಗುಲ್ಲ' ಎನ್ನುತ್ತಾರೆ.

ಇದು ಹೀಗಾದರೆ, "ಇದರ ಬಗ್ಗೆ ಅಧಿಕಾರಿಗಳಿಗೆ ದೂರುತ್ತಿದ್ದರೂ ಇದುವರೆಗೆ ಕ್ರಮ ತೆಗೆದುಕೊಳ್ಳದ್ದ ನೋಡಿದರೆ ಇಂದಿರಾ ಗಾಂಧಿಯವರ ಇಪ್ಪತ್ತು ಅಂಶಗಳ ಕಾರ್ಯಕ್ರಮಗಳನ್ನು ಪ್ರಚಾರ ಮಾಡಿದ್ದೇ ತಪ್ಪೆ ಎಂದು ಪ್ರಶ್ನಿಸಬೇಕಾಗುತ್ತದೆ. ಇಲ್ಲ ಈ ಪ್ರಚಾರ ಮಾಡುವುದು ಸರಿಯಾಗಿದ್ದಿದ್ದರೆ ಈ ಘಟನೆ ಪರಿಗಣಿಸಿ ಕ್ರಮ ಏಕೆ ತೆಗೆದುಕೊಳ್ಳುತ್ತಿಲ್ಲ?" ಎಂದು ಸಿದ್ದನಹುಂಡಿಯ ಯುವಕ ಸಂಘದವರು ಪ್ರಶ್ನಿಸುತ್ತಾರೆ. ಈ ತರದ ಅಸ್ಪೃಶ್ಯತೆ ದಬ್ಬಾಳಿಕೆ ಮುಂತಾದ ಅನೇಕ ಘಟನೆಗಳನ್ನು ಬಯಲು ಮಾಡಲು ಇವರು ಸಿದ್ಧರಿದ್ದಾರೆ ಅದರೆ ಈ ಬಗ್ಗೆ ಅಧಿಕಾರಿಗಳ ಉತ್ತರ : ಬರಿ ಮೌನ!

# ಒಂದು ವಿವೇಚನೆ

...ರಿಯು ಬೆಂಗಳೂರಿನಲ್ಲಿದ್ದು ವಿಜಾಪುರ, ಗುಲ್ಬರ್ಗ, ...ಾಂ ಕಡೆಯ ಹಳ್ಳಿಗಳಲ್ಲಿ ದೌರ್ಜನ್ಯಕ್ಕೆ ಒಳಗಾದ ...ನು ವಿಶೇಷ ದಳದ ಪೋಲೀಸ್ ಅಧಿಕಾರಿಯನ್ನು ...ವುದು ಅಸಾಧ್ಯ.

...ಅಸ್ಪೃಶ್ಯತಾ ಅಪರಾಧಗಳು ದಲಿತನ ಮೇಲಿನ ...ನ್ಯಗಳು ವಿಶೇಷ ಪೋಲೀಸ್ ಅಧಿಕಾರಿಯಿಂದ ...ಯಾಗಬೇಕೆ ಹೊರತು ಸ್ಥಳೀಯ ಪೋಲೀಸ್ ...ರಿಯಿಂದಲ್ಲ.

...ಶೇಷ ದಳದ ಉನ್ನತ ಹುದ್ದೆಗಳಿಗೆ ಹರಿಜನರನ್ನೇ ...ಕ ಮಾಡಬೇಕು.

...ಪತ್ರ, ಚಲನಚಿತ್ರ, ವಿವಿಧ ಪ್ರಚಾರ ತಂತ್ರಗಳಲ್ಲಿ ...ನರ ಮೇಲಿನ ದೌರ್ಜನ್ಯದ ಬಗ್ಗೆ ಶಿಕ್ಷೆಯನ್ನು ...ಜನಿಕರಿಗೆ ತಿಳಿಸಬೇಕು. ಇಷ್ಟಕೆಲ್ಲಾ ಪ್ರತ್ಯೇಕ ... ಮತ್ತು ಪ್ರಚಾರ ಇಲಾಖೆ ಬೇಕು.

...ಶೇಷ ದಳವು ಗ್ರಾಮಾಂತರ ಪ್ರದೇಶದಲ್ಲಿರುವ ...ಸಂಘಸಂಸ್ಥೆಗಳೊಡನೆ ಉತ್ತಮ ಬಾಂಧವ್ಯವನ್ನು ...ರಬೇಕು ಮತ್ತು ಅವುಗಳು ನೀಡಿದ ದೂರನ್ನು ...ಮಾಡಬೇಕು.

—ಮ. ಚಿ. ನರಸಿಂಹ ಮೂರ್ತಿ

# ಆರ್ಥಿಕ ಕಾರ್ಯಕ್ರಮಗಳು ಮತ್ತು ಬಡವರು

ಈಗ್ಗೆ ಸುಮಾರು ಒಂದು ವರ್ಷದ ಹಿಂದೆ ಇಡೀ ಇಂಡಿಯಾ ದೇಶದಲ್ಲಿ ಒಂದು ರೀತಿಯ ರಾಜಕೀಯ ಮತ್ತು ಆರ್ಥಿಕಬದಲಾವಣೆಗಳು ಆಗುತ್ತವೆ ಎಂಬ ವಾತಾವರಣ ತುಂಬಿಕೊಂಡಿತ್ತು. ಆದರೆ ಅದೇಕೋ ಅದಾವುದೂ ಆಗದೇ ತುರ್ತು ಪರಿಸ್ಥಿತಿ ಬಂದು ಬೇರೊಂದು ರೀತಿಯ ಬದಲಾವಣೆಯನ್ನು ಕಾಣುತ್ತಿದ್ದೇವೆ. ಈ ತುರ್ತು ಪರಿಸ್ಥಿತಿಯಿಂದ ಹಳ್ಳಿಗಳಲ್ಲಿ ಹರಿಜನ ಮತ್ತು ಹಿಂದುಳಿದ ಪಂಗಡಗಳೆಂದು ಉಳಿದಿರುವ ಜನಾಂಗಕ್ಕೆ ಮನೆಗಳು, ಸಾಲಗಾರರ ಹಿಡಿತದಿಂದ ಮುಕ್ತಿ ಮತ್ತು ಜೀತದಿಂದ ವಿಮೋಚನೆ ಇಂಥವೇ ಮೊದಲಾದವನ್ನ ಇಂದಿರಾಗಾಂಧಿಯವರು ಘೋಷಣೆ ಮಾಡಿದರು. ಭಾರತ ಮಟ್ಟದ ಈ ಕಾರ್ಯಕ್ರಮಗಳು ಬಡತನದಿಂದ ನರಳುತ್ತಿರುವ ಬಡಜನರಿಗಾಗಿಯೇ ಎಂಬುದನ್ನೂ ಸಹ ಸರ್ಕಾರ ಸ್ಪಷ್ಟಪಡಿಸಿದೆ.

ಆದರೆ ಇಂದು ನಮ್ಮ ಹಳ್ಳಿಗಳಲ್ಲಿ ಆಗುತ್ತಿರುವ ಅನುಕೂಲಗಳ ಬಗ್ಗೆ ಕಣ್ಣಾಯಿಸಿದರೆ ಹಿಂದುಳಿದವರಲ್ಲಿ ಮುಂದುವರಿದ ಜನರು ಈ ಸೌಲಭ್ಯಗಳನ್ನು ಪಡೆಯುತ್ತಿರುವರೇ ಹೊರತು ತೀರಾ ಬಡವನು ಏನೂ ಆಗದೆ ಉಳಿದಿದ್ದಾನೆ. ಇದಕ್ಕೆ ಕಾರಣ ಈ ಕಾರ್ಯಕ್ರಮಗಳನ್ನು ಕಾರ್ಯಗತ ಮಾಡಬೇಕಾಗಿರುವವರು ಹಳ್ಳಿಯ ಛೇರ್ಮನರು ಮತ್ತು ತಾಲ್ಲೋಕ್ ಮಟ್ಟದ ಅಧಿಕಾರಿಗಳು. ಆದರೆ ನಮ್ಮ ಹಳ್ಳಿಗಳಲ್ಲಿ ಗೊತ್ತಿರುವಂತೆ ಛೇರ್ಮನ್‌ನ ಪರ ಇದ್ದವರಿಗೆ ಮತ್ತು ಆತನ ಎಲ್ಲ ಅಭಿಪ್ರಾಯಗಳನ್ನು ಪ್ರಶ್ನಿಸದೆ ಒಪ್ಪುವವರಿಗೆ ಅವನಿಂದ ಸಹಾಯ ಮತ್ತು ಸಲಹೆಗಳು ದೊರಕುತ್ತಾವೆ ಹೊರತು ಅವನನ್ನು ಪ್ರಶ್ನಿಸಿದವರಿಗಲ್ಲ. ಈ ಹಿನ್ನೆಲೆಯಲ್ಲಿ ಹೆಚ್ಚು ಶಕ್ತಿ ಇದ್ದವ ಈ ಅನುಕೂಲಗಳನ್ನು ಪಡೆಯುತ್ತಾನೆ. ಮತ್ತು ತಿಳಿಯದವ ಹಿಂದೆ ಬೀಳುತ್ತಾನೆ. ಉದಾ: ಹರಿಹರ ತಾಲ್ಲೋಕು ಹನಗವಾಡಿಯಲ್ಲಿ ೨೦೦೦ ರೂ.ಗಳಿಂದ ೨೫೦೦ ರೂ.ಗಳಷ್ಟು ಹಣವನ್ನು ಕಳೆದ ವರ್ಷ ಕೊಟ್ಟಿದ್ದರು. ಮತ್ತು ಈ ಅನುಕೂಲದಿಂದ ಸುಮಾರು ೨೫ ಕ್ಕೂ ಹೆಚ್ಚು ಮನೆಗಳನ್ನು ಕಟ್ಟಿಕೊಂಡರು. ಆದರೆ ಒಂದು ಆಶ್ಚರ್ಯದ ಸಂಗತಿಯೆಂದರೆ ಈ ೨೫ ಮನೆಗಳಲ್ಲಿ ತೀರಾ ಹಿಂದುಳಿದ ಮತ್ತು ಅಸ್ಪೃಶ್ಯತೆಯ ನೋವಿನಿಂದ ಬಳಲುವ 'ಮಾದಿಗ'ರಲ್ಲಿ ಯಾರೊಬ್ಬರೂ ಮನೆ ಕಟ್ಟಿಕೊಳ್ಳಲಾಗಲಿಲ್ಲ. ಏಕೆಂದರೆ ೨೫೦೦ ರೂ. ಗಳನ್ನು ಪಡೆಯುವ ಜನರು ತಮ್ಮ ಕೈಯಿಂದಲೇ ಕಡಿಮೆ ಎಂದರೂ ೩೦೦ ರೂ ಗಳಿಂದ ೫೦೦ ರೂ ಗಳಷ್ಟು ಸ್ವತಃ ಹಣ ಖರ್ಚುಮಾಡಿ ಸರ್ಕಾರ ತಯಾರಿಸಿ ಕೊಟ್ಟ

(ಏಳನೇ ಪುಟಕ್ಕೆ)

## ಅಳಲು

## ರಕ್ಷಣಾ ವ್ಯವಸ್ಥೆ ಬೇಕು

'ಪಂಚಮ'ಎನೇ ಸಂಚಿಕೆಯಲ್ಲಿ ಪ್ರಕಟವಾಗಿರುವ ಹಳೇಹಳ್ಳಿ ಹರಿಜನರ ಮೇಲಿನ ದೌರ್ಜನ್ಯ ಕುರಿತ ವರದಿಯನ್ನು ಓದಿ ತುಂಬಾ ವ್ಯಥೆಯಾಯಿತು. ಇಂಥ ಹಲವಾರು ದೌರ್ಜನ್ಯಗಳು ದಿನವೂ ನಡೆಯುತ್ತಲೇ ಇವೆ. ಇತ್ತೀಚೆಗಂತೂ ಇವು ಅಪರಿಮಿತವಾಗಿವೆ. ಪತ್ರಿಕೆಯವರ ಕಣ್ಣಿಗೆ ಕಾಣದ ಅಸಂಖ್ಯಾತ ಇಂಥ ಪ್ರಕರಣಗಳು ನಡಿಯುತ್ತಿವೆ. 'ಎಮರ್ಜನ್ಸಿ'ಯನ್ನು ಸರ್ಕಾರ ಘೋಷಿಸಿರುವಾಗಲೇ ಈ ಎಲ್ಲವೂ ನಡೆಯುತ್ತಿವೆ. ಆದರೂ ಸರ್ಕಾರ ಈ ಕುರಿತು ಸರಿಯಾದ ಕ್ರಮ ತೆಗೆದುಕೊಳ್ಳುತ್ತಿಲ್ಲ. ದಲಿತರ ರಕ್ಷಣೆಗಾಗಿ ನಿಜವಾಗಿ ಯಾರೂ ಶ್ರಮಿಸುತ್ತಲೇ ಇಲ್ಲ ಎನ್ನುವಂತ ಪರಿಸ್ಥಿತಿ ಈಗ ಬಂದಿದೆ. ಒಂದು ಕಡೆ ಮೇಲ್ಜಾತಿ ರಾಕ್ಷಸರ,ಇನ್ನೊಂದು ಕಡೆ ಅಂಥ ಅಹಂಕಾರಿ ಅಧಿಕಾರಿಗಳ ತುಳಿತದ ಅಪಹಾಸ್ಯದ ಕೆಳಗೆ ಷಂಡರಂತೆ ಬದುಕುವ ನಮಗೆ ಹೇಸಿಕೆ ನಾಚಿಕೆ ಆಗುವುದು ಯಾವಾಗ ? ಅಯ್ಯೊ....ಯಾವಾಗ ?!

—ಎನ್.ಸಿ. ಸಿದ್ದರಾಜು,
ನಾಡನಹಳ್ಳಿ, ಮೈಸೂರು ತಾಲ್ಲೂಕು

## ಈ ಖಾಲಿ ಹೊಟ್ಟೆ ಜನರ ಕೇಳುವವರಾರು ?

ನಮ್ಮೂರಲ್ಲಿ ಜೀತಕ್ಕೆ ಬದುಕುತ್ತಿದ್ದವರೇ ಹೆಚ್ಚು ಮಂದಿ. ಸರ್ಕಾರದ ದಿಟ್ಟ ಕ್ರಮದಿಂದಾಗಿ ಈ ಒಂದು ಅನಿಷ್ಟ ತೊಲಗಿದಂತಾಗಿದೆ. ಜೀತ ಬಿಟ್ಟ ಎಲ್ಲರೂ ಮನೆಗೆ ಬಂದಾಗಿದೆ. ಆದರೆ ಈಗೊಂದು ಅನಿಷ್ಟ ಇವರ ಎದುರಾಗಿದೆ.

ಇತ್ತೀಚಿನ ಬದಲಾವಣೆಗಳಿಂದಾಗಿ ಮೇಲ್ಜಾತಿಯವರೆಲ್ಲ ಬಿಗಿಯಾಗಿದ್ದಾರೆ. ಕಾಡಿಬೇಡಿದರೂ ದಿನಗೂಲಿ ಸಿಕ್ಕುವಂತಿಲ್ಲ. ಮಳೆ ಬೀಳದ್ದಕ್ಕಾಗಿ ತಮ್ಮವರ ಹೊಲ ಗದ್ದೆಗಳಲ್ಲೂ ಕೆಲಸ ಮಾಡುವಂತಿಲ್ಲ. ಕೂಲಿ ಮಾಡದೆ ಹೊಟ್ಟೆ ತುಂಬುವಂಗಿಲ್ಲ. ಇನ್ನೊಂದು ಕಡೆ ಕೂಲಿ ಸಿಕ್ಕುವಂಗಿಲ್ಲ. ಹೀಗಾಗಿ ಹೊಟ್ಟೆ ಖಾಲಿ.

—ಇದು ನಮ್ಮೂರಿನ ಜನ ಎರಡು ಮೂರು ತಿಂಗಳುಗಳಿಂದ ಬದುಕುತ್ತಿರುವ ರೀತಿ.

ಈ ಮಧ್ಯೆ ಜೀತ ಮುಕ್ತರಿಗೆ ಸರ್ಕಾರದಿಂದ ಪ್ರಹಾರವಾಗಿ 500 ರೂ. ಮತ್ತು ಬಟ್ಟೆಗಳು ದೊರೆಯುತ್ತವೆ ಎಂದು ಸುದ್ದಿಯಾಗಿದೆ. ಅದಕ್ಕಾಗಿ ಅರ್ಜಿ ಹಾಕಿ ತಿಂಗಳುಗಳು ಕಳೆಯುತ್ತಾ ಬಂದಿವೆ. ತಾಲ್ಲೋಕ್ ಬೋರ್ಡಿಗೆ ತಿರುಗಿ ತಿರುಗಿ ಬಿ ಡಿ ಒ ಸಾಹೇಬರಿಗೆ ಕೈಮುಗಿದುಗೋಗರೆದು ಸುಸ್ತಾಗಿದೆ. ಒಂದೇ ತಾಲೋಕಿನ ನಮ್ಮ ಪಕ್ಕದ ಊರು ಕುಪ್ಪಾದಲ್ಲಿ —ಅದೂ ಒಂದಿಬ್ಬರು ಮೂವರಿಗಷ್ಟೇ ಈ ಪರಿಹಾರವನ್ನು ಕೊಟ್ಟು ಮಿಕ್ಕ ಊರುಗಳಲ್ಲಿ ಇದ ಕೇಳುವವರೇ ಇಲ್ಲದಿರುವುದ ನೋಡಿದರೆ ಇದೆಲ್ಲ ಬರೀ ಕಣ್ಣೊರೆಸುವ ನಾಟಕ ಎಂದು ಎಂಥವನಿಗೂ ಎನಿಸುವುದಿಲ್ಲವೆ? ಇದು ಹೀಗಾದರೆ ಈ ಖಾಲಿ ಹೊಟ್ಟೆಯ ಜನರ ಕೇಳುವವರಾರು ? ಖಾಲಿ ಕೈಗಳಿಗೆ ಕೆಲಸ ಕೊಡುವವರಾರು ?!

—ಎಸ್. ನಿಂಗಯ್ಯ, ಸಿದ್ದನಹುಂಡಿ
ಟಿ. ನರಸೀಪುರ ತಾ॥ ಮೈಸೂರು ಜಿ॥

## ಸರ್ಕಾರಿ ಶಾಲೆಯ ಹರಿಜನ ಮಕ್ಕಳ ಪಾಡು

ನಂಜನಗೂಡು ತಾಲ್ಲೂಕಿನ ದೇವನೂರು ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ಹರಿಜನ ಮಕ್ಕಳನ್ನು ನಡೆಸಿಕೊಳ್ಳುತ್ತಿರುವ ರೀತಿ ಇದು:

ಈ ಶಾಲೆಯಲ್ಲಿ ಕುಡಿಯುವ ನೀರನ್ನು ತುಂಬಿಟ್ಟಿರುತ್ತಾರೆ. ನೀರು ಕುಡಿಯಲು ಸವರ್ಣೀಯ ಮಕ್ಕಳಾದರೆ ಗ್ಲಾಸ್‌ಗಳಲ್ಲಿ ಕೊಟ್ಟು, ಹರಿಜನರ ಮಕ್ಕಳಾದರೆ ಕೈಗೆ ನೀರನ್ನು ಬಿಡುತ್ತಾರೆ. ಈ ರೀತಿ ಮಾಡುವ ಪದ್ಧತಿ ಒಬ್ಬ ಮುಸ್ಲಿಂ ಜವಾನನಿಂದ. ಇದಕ್ಕೆ ಅಲ್ಲಿಯ ಶಿಕ್ಷಕರ ಸಮ್ಮತಿಯೂ ಇದೆ.

ಇನ್ನೊಂದು ಅಂದರೆ ಸರ್ಕಾರ ಹರಿಜನ ಮಕ್ಕಳಿಗೆ 50 ರೂ.ಸ್ಕಾಲರ್‌ಶಿಪ್ ನೀಡುತ್ತಿದೆ.ಹೀಗೆ ಬಂದ ಸ್ಕಾಲರ್‌ಶಿಪ್ ಅನ್ನು ಕಳೆದ ವರ್ಷ ಈ ಶಾಲೆಯ ಮುಖ್ಯೋಪಧ್ಯಾಯರು,ವಿದ್ಯಾರ್ಥಿಗಳ ಅನಕ್ಷರಸ್ಥ ತಂದೆ ತಾಯಿಗಳಿಂದ 50 ರೂ. ಕೊಟ್ಟಿದ್ದೇವೆಂದು ರುಜು ಮಾಡಿಸಿಕೊಂಡು ಬರಿ20 ಮತ್ತು 25ರೂ. ಗಳನ್ನು ಕೊಟ್ಟಿದ್ದರು. ನಮಗೆ ಇದು ಗೊತ್ತಾಗಿ, ಹೋಗಿ ಕೇಳಿದಾಗ ಹಣತಿಂದ ತಪ್ಪೊಪ್ಪಿಕೊಂಡು ಒಂದೆರಡು ತಿಂಗಳ ಮೇಲೆ ತಿಂದಿದ್ದ ಹಣವನ್ನು ವಿದ್ಯಾರ್ಥಿಗಳಿಗೆ ಕೊಟ್ಟರು.

ವಿದ್ಯಾವಂತರ ಸಂಖ್ಯೆ ಬಹಳಷ್ಟಿರುವ ಮತ್ತು ರಾಜಕಾರಣಿಗಳು ಬದುಕುತ್ತಿರುವ ಇಂಥ ದೊಡ್ಡ ಊರಲ್ಲೇ ಹೀಗಾಗುತ್ತಿದ್ದರೆ, ಇನ್ನು ಸಣ್ಣ ಪುಟ್ಟ ಹಳ್ಳಿಗಳಲ್ಲಿ ಇನ್ನೆಷ್ಟು ನಡೆಯುತ್ತಿವೆಯೊ ಏನೊ...

—ಬಸವರಾಜು

## ದಾಖಲೆಗಳು

(ಕಳೆದ ಸಂಚಿಕೆಗಳಿಂದ ಮುಂದುವರೆದುದು)

● 15.5.75 ಹರಿಯಾಣ ಕೈಥಾಲ್ ಪೋಲೀಸ್ ಠಾಣೆ ವ್ಯಾಪ್ತಿಗೆ ಸೇರಿದ ಹಳ್ಳಿಯೊಂದರಲ್ಲಿ ಸವರ್ಣೀಯರು 65 ಮಂದಿ ಹರಿಜನರನ್ನು ಚೆನ್ನಾಗಿ ಥಳಿಸಿ, ಕೆಲವರಿಂದ ಜಮೀನು ಆಕ್ರಮಣ ನಡೆಸಿದ್ದಾರೆ.

● 19.5.75 ವಿಜಯವಾಡ: ಕಂಚಿಕಚೇರ್ಲಾ ಗ್ರಾಮದಲ್ಲಿ ಹರಿಜನರ ಮೂರು ಜೋಡಿಗಳ ಮದುವೆ ನಡೆಯುತ್ತಿದ್ದಾಗ ಮೇ 13ರಂದು 300 ಹರಿಜನರ ಸಮೂಹದ ಮೇಲೆ ಸವರ್ಣೀಯ ಜಮೀನ್ದಾರರು ದಾಳಿ ನಡೆಸಿ ಹರಿಜನರನ್ನು ಗಾಯಗೊಳಿಸಿದ್ದಾರೆ.

● 21.5.75 ತಂಜಾವೂರು: ಮನೋಜಿಪಟ್ಟಿ ಗ್ರಾಮದ ಕೆರೆಯಲ್ಲಿ ಹರಿಜನ ಕಾಲೇಜು ವಿದ್ಯಾರ್ಥಿಯೊಬ್ಬನು ಸ್ನಾನಮಾಡಿ ಸವರ್ಣೀಯರ ಬೀದಿಯಲ್ಲಿ ಸೈಕಲ್ ಮೇಲೆ ಹೋದನೆಂಬ ಕಾರಣಕ್ಕಾಗಿ ಅಲ್ಲಿನ ಗ್ರಾಮಸ್ಥರು ಆತನ ಮೇಲೆ ಹಲ್ಲೆ ನಡೆಸಿದ್ದಾರೆ.

● 27-5-75 ಟಿ. ನರಸಿಪುರ: ಕಲಿಯೂರು ಗ್ರಾಮದಲ್ಲಿ ಹರಿಜನರ ಮದುವೆ ಹೆಣ್ಣು ಮತ್ತು ಗಂಡು, ಸವರ್ಣೀಯರ ಬೀದಿಯಲ್ಲಿ ಚಪ್ಪಲಿ ಹಾಕಿಕೊಂಡು, ಕೊಡೆ ಹಿಡಿದುಕೊಂಡು ಹೋದುದರಿಂದ ಅಲ್ಲಿನ ಸವರ್ಣೀಯರು ಜಗಳ ಕಾದು ಅನೇಕ ಹರಿಜನರಿಗೆ ಗಾಯಗಳಾಗಿದೆಯಲ್ಲದೆ ದೊಣ್ಣೆಯಿಂದ ಚೆನ್ನಾಗಿ ಥಳಿಸಿ ಹುಡುಗನೊಬ್ಬನನ್ನು ಕೆರೆಗೆ ಎಸೆಯಲಾಯಿತು. ಹಾಗೂ ಹರಿಜನರ 9 ಗುಡಿಸಲುಗಳನ್ನು ನೆಲಸಮ ಮಾಡಿ, ಇನ್ನೂ 9 ಗುಡಿಸಲುಗಳಿಗೆ ಜಖಂ ಆಗಿದೆ.

● 1-6-75ಸರ್ಜಾಪುರ ; ಇಲ್ಲಿಗೆ ಸಮೀಪದಲ್ಲಿರುವ ಚಿಕ್ಕಹಾಸರಹಳ್ಳಿಯ ಹರಿಜನರಿಗೆ ಸರ್ಕಾರಿ ಗೋಮಾಳದಲ್ಲಿ ಮಂಜೂರು ಮಾಡಿದ್ದ ವಸತಿ ನಿವೇಶನಗಳ ಮೇಲೆ ಸವರ್ಣೀಯರ ಆಕ್ರಮಣ ಸಾಗುವಳಿ. (ಮುಂದುವರಿಯುವುದು)

## ಪುಸ್ತಕ ವಿಮರ್ಶೆ

ಹೋರಾಟದ ಜೀವಿ : ಲೇಖಕ : ಟೀಕೆಹಳ್ಳಿ ಗೋಪಾಲ ಕೃಷ್ಣ ಪ್ರ : ಏಕಲವ್ಯ ಪ್ರಕಾಶನ, ೧,೧ನೇ ಕ್ರಾಸ್, ೩ನೇ ಮೇನ್, ಗಾಂಧೀಗ್ರಾಮ, ಮಾರುತೀ ಬಡಾವಣೆ, ಬೆಂಗಳೂರು-೨೧ ಬೆಲೆ : ೨ ರೂ.

ತೀರಾ ಸರಳವಾಗಿ, (ಕೆಲವು ಸಂಸ್ಕೃತ ಪದಗಳನ್ನು ಬಿಟ್ಟರೆ) ಸೂಕ್ಷ್ಮವಾಗಿ ಸಂಕ್ಷಿಪ್ತವಾಗಿ ಅಂಬೇಡ್ಕರರ ಜೀವನ ಈ ಪುಸ್ತಕದಲ್ಲಿ ಚಿತ್ರಿತವಾಗಿದೆ. ಸಾವಿರಾರು ವರ್ಷಗಳ ಕತ್ತಲ ಕೆಸರಲ್ಲಿ ಒದ್ದಾಡುತ್ತಿರುವ ದಲಿತರಿಗೆ ಈ ಕಿರು ಹೊತ್ತಿಗೆ ಒಳ್ಳೆಯ ತಿಳುವಳಿಕೆಯನ್ನು ಮೂಡಿಸುತ್ತದೆ.

ಇಂಡಿಯಾದ ಬಸಿರಲ್ಲಿ ಇನ್ನೂ ಭ್ರೂಣವಾಗೇ ಇರುವ ಈ ನಾಡ ದುಡಿವ ಮಕ್ಕಳ ಕುತ್ತಿಗೆಗೆ ಚೂರಿ ಇಟ್ಟು

# ಸರಳ ಸ್ಪಷ್ಟ ಉಪಯುಕ್ತ

ಇಂದು ಅಲ್ಲಲ್ಲೇ ದಲಿತ ಜನ ಒಗ್ಗಟ್ಟಾಗಿ ಸ್ವತಂತ್ರ ಬದುಕಿಗಾಗಿ, ನ್ಯಾಯಕ್ಕಾಗಿ ಹೋರಾಟ ಮಾಡಲು ಧ್ವನಿ ಮಾಡುತ್ತಿದ್ದಾರೆ. ಈ ಧ್ವನಿಯ ಹಿಂದೆ ನೆರಳಾಗಿ ನಿಂದು ಅದಕ್ಕೆ ಪುಷ್ಟಿ ಕೊಡುತ್ತಿರುವ ವ್ಯಕ್ತಿಯೊಂದಿದೆ. ಅವೇ ಡಾ|| ಬೀಮರಾಂಜಿ ಅಂಬೇಡ್ಕರ್.

ಮಾನವ ಮಾನವನನ್ನೇ ಮಾನವನೆಂದು ಪರಿಗಣಿಸದಿದ್ದ ಕಾಲದಲ್ಲಿ ಹುಟ್ಟಿದ ಅಂಬೇಡ್ಕರರ ಕುರಿತಾದ ಪುಸ್ತಕಗಳು ಕನ್ನಡದಲ್ಲಿ ತೀರಾ ವಿರಳ. ಈಗೀಗ ಅಲ್ಲೊಂದು ಇಲ್ಲೊಂದು ತಲೆಹಾಕುತ್ತಿವೆ. ಇಂಥ ಹುಟ್ಟು ಹೋರಾಟಗಾರ ಕ್ರಾಂತಿಯ ನೆರಳಾದ ಅಂಬೇಡ್ಕರರ ಹುಟ್ಟು ಜೀವನ, ವಿಚಾರ ಕುರಿತ ಶ್ರೀ ಟೀಕೆಹಳ್ಳಿ ಗೋಪಾಲ ಕೃಷ್ಣರ 'ಹೋರಾಟದ ಜೀವಿ' ದಲಿತರು ಓದಬೇಕಾದ ಒಂದು ಉಪಯುಕ್ತ ಪುಸ್ತಕ.

ಬದುಕುತ್ತಿರುವ ಈ ವ್ಯವಸ್ಥೆಯ ಬಗ್ಗೆ ಪ್ರಜ್ಞೆ ಮೂಡಿಸುವಲ್ಲಿ ಈ ಸಣ್ಣ ಪುಸ್ತಕ ಸಹಾಯಕವಾಗಿದೆ. ಬರೀ ಜಾತಿ ಹೋರಾಟದಲ್ಲೇ ನಂಬಿಕೆ ಇಟ್ಟಿರುವ ಸೋಷಲಿಷ್ಟರು ಅಂತೆಯೇ ಬರೀ ವರ್ಗ ಹೋರಾಟದಲ್ಲೆ ನಂಬಿಕೆ ಇಟ್ಟಿರುವ ಕಮ್ಯುನಿಷ್ಟರು ಈ ಎರಡರ ನಡುವೆ ಚೂರು ರೊಟ್ಟಿ ಎಸೆದು ಸಾಕುವ ಈ ವ್ಯವಸ್ಥೆ ಎಲ್ಲದರ ಬಗ್ಗೆಯೂ ಈಗ ದಲಿತ ಯೋಚಿಸಬೇಕಾಗಿದೆ.

ಮೂಲಭೂತವಾದ ಈ ಎಲ್ಲ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳಲು ದಲಿತರು ಪ್ರಯತ್ನಿಸಬೇಕು. ಈ ದಿಕ್ಕಲ್ಲಿ ವಿಚಾರ ಪ್ರಚೋದನೆ ಮಾಡುವಲ್ಲಿ 'ಹೋರಾಟದ ಜೀವಿ' ಸಹಕಾರಿಯಾಗಬಲ್ಲದು. ಅಂತೆಯೇ ಈ ಕುರಿತು ಹೆಚ್ಚು ತಿಳಿದುಕೊಳ್ಳಲು ಪ್ರಚೋದಿಸಬಲ್ಲದು.

—ಇಂದೂಧರ ಹೊನ್ನಾಪುರ

## ಮಾನವತಾ ಮದುವೆ ವೇದಿಕೆ

ನಮ್ಮ ದೇಶದಲ್ಲಿ ಮನುಷ್ಯ ಮನುಷ್ಯರ ನಡುವೆ ಮದುವೆಯಾಗುವುದು ಅಪರೂಪವೆನ್ನಬಹುದು. ನಮ್ಮ ದೇಶದಲ್ಲಿ ಜಾತಿಗೆ ಮದುವೆ ಆಗುತ್ತವೆ; ಹಣಕ್ಕೆ ಮದುವೆ ಆಗುತ್ತವೆ ; ಅಂತಸ್ತಿಗೆ ಮದುವೆ ಆಗುತ್ತವೆ; ಗೌರವಕ್ಕೆ ಮದುವೆ ಆಗುತ್ತವೆ. ಆದರೆ ಮನುಷ್ಯ ಮನುಷ್ಯ ನಡುವೆ ಮದುವೆ ಆಗುವುದು ಅಪರೂಪ. ಹೀಗಿದ್ದೂ ಅಲ್ಲೊಂದು ಇಲ್ಲೊಂದು ಅಂತರ್‌ಮತೀಯ, ಅಂತರ್‌ಜಾತೀಯ, ಸಂಪ್ರದಾಯ ವಿರೋಧಿ, ಸರಳ, ವರದಕ್ಷಿಣೆರಹಿತ ಮದುವೆಗಳು ಜರುಗುತ್ತಲೂ ಇವೆ. ಇಂಥವಕ್ಕೆಲ್ಲ ನಮ್ಮ ಸಮಾಜದಲ್ಲಿ ಇರುವ ಅಡ್ಡಿ ಆತಂಕಗಳು ನೂರಾರು. ಆದ್ದರಿಂದ ವಿಚಾರವಂತರು, ಪ್ರಗತಿಪರರು ಮೇಲ್ಕಂಡಂಥ ವಿವಾಹಗಳಿಗೆ ಬೆಂಬಲಿಸಬೇಕು, ಬೆಂಬಲಿಸಿದರಷ್ಟೇ ಸಾಲದು ಮುಂದೆ ಬಂದು ನೆರವೇರಿಸಿಕೊಡಬೇಕು. ಮಾನವತಾ ಮದುವೆಗಳು ಯಾವ ಆತಂಕಗಳೂ ಇಲ್ಲದೆ ನೆರವೇರುವಂಥ ವಾತಾವರಣ ಉಂಟುಮಾಡಬೇಕು.

ಈ ದಿಕ್ಕಲ್ಲಿ ಕೆಲಸಮಾಡಲು 'ಮಾನವತಾ ಮದುವೆ ವೇದಿಕೆ' ರೂಪು ಪಡೆದಿದೆ. ಇದು ಅಂತರ್‌ಮತೀಯ ಅಂತರ್ ಜಾತೀಯ, ಸರಳ ಮದುವೆಗಳನ್ನು ವ್ಯವಸ್ಥೆ ಮಾಡುವುದು. ಇಂಥ ಮದುವೆಗಳಲ್ಲಿ ಏಳುವ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಸಹಕರಿಸುವುದು. ಇಂಥ ಮದುವೆ ಆಗಬಯಸುವವರಿಗೆ ವರ ವಧು ಅನ್ವೇಷಣೆಯಲ್ಲೂ ಈ ವೇದಿಕೆ ಕೆಲಸಮಾಡುವುದು.

ಇದಕ್ಕಾಗಿ 'ಮಾನವತಾ' ವರ-ವಧು ವಿಭಾಗವನ್ನು ಆಂದೋಲನ ಮತ್ತು ಪಂಚಮ ಪತ್ರಿಕೆಗಳಲ್ಲಿ ಇನ್ನು ಮುಂದೆ ಆರಂಭಿಸುವೆವು. ಈ 'ಮಾನವತಾ ವರ-ವಧು' ವಿಭಾಗದಲ್ಲಿ ಅಪೇಕ್ಷಿಸುವವರು ತಮ್ಮ ಪರಿಚಯ ಕೊಟ್ಟು ತಮಗೆ ತಕ್ಕಂಥ ಗುಣಗಳ ವರ ಅಥವಾ ವಧುವನ್ನು ಕೇಳಬಹುದು. ಮತ್ತು ಈಗಾಗಲೇ ಇಂಥ ವಿವಾಹ ಆಗಿರುವವರು ತಮ್ಮ ಪರಿಚಯವನ್ನು ಪ್ರಕಟಣೆಗೆ ಕೊಡಬಹುದು. ಸೂಕ್ತವಾಗಿ ಕ್ರಮೇಣವಾಗಿ ಇವನ್ನು ಪ್ರಕಟಿಸಲಾಗುವುದು.

ಹೆಚ್ಚಿನ ವಿವರಗಳಿಗೆ ಬರೆಯಿರಿ :
ವ್ಯವಸ್ಥಾಪಕ
'ಮಾನವತಾ ಮದುವೆ ವೇದಿಕೆ'
2649/2, ಬಿ.ಬಿ. ಅಂಡ್ ಸನ್ಸ್ ರೋಡ್
ಕೆ. ಜಿ. ಕೊಪ್ಪಲು, ಮೈಸೂರು-9



(ಐದನೇ ಪುಟದಿಂದ)

ಯೋಜನೆಯಂತೆ ಮನೆ ಕಟ್ಟಬೇಕು. ಒಂದೊತ್ತು ಊಟಕ್ಕಿಲ್ಲದ ಈ ಜನರು ಓಡಾಡಿ ಮಾಡಿಸಿಕೊಳ್ಳುವ ಚೈತನ್ಯವಾಗಲೀ ಕೂಲಿ ಬಿಟ್ಟರೆ ಊಟ ಸಿಗುವುದಾಗಲೀ ಇಲ್ಲದಿರುವುದರಿಂದ ಇವರು ಈ ೨೦ ಅಂಶ ಕಾರ್ಯಕ್ರಮದಲ್ಲೂ ಹೀಗೆ ಉಳಿಯುತ್ತಾರೆ.

ಈ ಜನರಿಗೆ ಮನೆ ಕಟ್ಟಿಕೊಡಬೇಕೆಂಬ ಬೇಡಿಕೆ ಹೊತ್ತು ಬಿ.ಡಿ.ಒ ಸಾಹೇಬರನ್ನು ಕೇಳಿದರೆ ಹಿಂದೆ ಕೊಡುತ್ತಿದ್ದ ೨೫೦೦ ರೂಗಳನ್ನು ಈಗ ಕೊಡಲಾಗುವುದಿಲ್ಲ, ಈಗ ಬರೀ ೧೨೫೦ ರೂ.ಗಳನ್ನು ಕೊಡುತ್ತಿದ್ದೇವೆ. ಅದೂ ಸರ್ಕಾರಿ ಯೋಜನೆಯಂತೆಯೇ ಮನೆ ಕಟ್ಟಬೇಕು. ಅವರ ಯೋಜನೆಯಂತಾದರೆ ಕನಿಷ್ಟ ೩೦೦೦ ರೂ.ಗಳು ಬೇಕಾಗುತ್ತವೆ. ೨೫೦೦ ರೂ.ಗಳನ್ನು ಕೊಡುವಾಗ ೫೦೦ ರೂ.ಗಳನ್ನು ಜೋಡಿಸಿಕೊಳ್ಳಲಾಗದ ಬಡವನು ೧೨೫೦ ರೂ.ಗಳನ್ನು ಕೊಟ್ಟಾಗ ಉಳಿದ ಹಣ ಜೋಡಿಸಿಕೊಳ್ಳುವುದಾದರೂ ಹೇಗೆ? ಮನೆಗಳಾಗುವುದಾದರೂ ಹೇಗೆ?

ಒಂದು ಯೋಜನೆಯಲ್ಲಿ ಕಂಡುಂಡ ತಪ್ಪುಗಳನ್ನು ಪುನಃ ಮುಂದಿನ ಯೋಜನೆಗಳು ತಿದ್ದಿಕೊಂಡು ಬಡವರಲ್ಲಿ ತೀರಾ ಬಡವನಿಗೆ ತಲುಪಿಸುವ ಯೋಜಕರು ತಾಲ್ಲೂಕ್ ಮಟ್ಟದಲ್ಲಿ ಬೇಕಾಗಿದೆ- 'ಎಷ್ಟು ಹಣ ಕೊಟ್ಟರೂ ಕಟ್ಟಿಕೊಳ್ಳಲಾಗದವರು' ಎಂದು ಬಯ್ಯುವ ಬದಲು ಆ ಸ್ಥಿತಿಗೆ ಇಟ್ಟ ಅಥವಾ ತಳ್ಳಿದ ಮೇಲ್ವರ್ಗದಜನರು ಯೋಚಿಸಬೇಕು ಅಧಿಕಾರಿಗಳು ಅರಿಯಬೇಕು.

—ರುದ್ರಪ್ಪ ಹನಗವಾಡಿ

# ಅಖಂಡ ಭಾರತ ಮತ್ತು ಹಿಂದುಳಿದ ವರ್ಗಗಳು

ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುತ್ತಿರುವ ಹಿಂದುಳಿದ ವರ್ಗಗಳು ಎಷ್ಟು ಮೂರ್ಖತನ ಪ್ರದರ್ಶಿಸುತ್ತಿವೆ ಎನ್ನುವುದು ಇತ್ತೀಚೆಗೆ ಬೋವಿ ಜನಾಂಗವನ್ನು ಕರ್ನಾಟಕದ ನಿಮ್ನ ವರ್ಗಗಳ ಪಟ್ಟಿಯಿಂದ ತೆಗೆಯಕೂಡದೆಂಬ ಒತ್ತಾಯ ತರುತ್ತಿರುವುದನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ತಾವೂ ಅಸ್ಪೃಶ್ಯರು ಎನ್ನುವುದು ಅವರ ವಾದ. ಸ್ಪೃಶ್ಯತೆ ಅಥವಾ ಅಸ್ಪೃಶ್ಯತೆಯ ಅಂಶವನ್ನು ಬಿಟ್ಟರೆ ಗ್ರಾಮಾಂತರ ಪ್ರದೇಶದ ಶೇಕಡಾ 90 ಭಾಗ ಜನರು ಒಂದೇ ಆರ್ಥಿಕ, ಸಾಮಾಜಿಕ, ಮತ್ತು ರಾಜಕೀಯ ಅವಸ್ಥೆಯಲ್ಲಿ ಸಿಕ್ಕಿಕೊಂಡಿದ್ದಾರೆ ಹಾಗೂ ಇನ್ನುಳಿದ ಭಾರತದ ಜನರ ದೃಷ್ಟಿಯಲ್ಲಿ ಅವರೆಲ್ಲರೂ ಅಸ್ಪೃಶ್ಯರು ಎನ್ನುವ ಅಂಶ ಹಿಂದುಳಿದ ವರ್ಗಗಳ ನಾಯಕರಿಗೆ ಗೋಚರವಾದಂತೆಯೇ ಇಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಸವರ್ಣೀಯರಿಗೂ ಅವರ್ಣೀಯರಿಗೂ ನಡೆಯುತ್ತಿರುವ ಕಲಹಗಳಿಗೂ ಈ ಅಜ್ಞಾನವೇ ಕಾರಣ.

ಎಲ್ಲಿಯವರೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ಸಮಾನತೆಯನ್ನು ಸಾಧಿಸಲು ಸಾಧ್ಯವಾಗುವುದಿಲ್ಲವೋ ಅಲ್ಲಿಯವರೆಗೆ ಈ ಕಲಹಗಳಿಗೆ ಕೊನೆಯಿಲ್ಲ. ಆದರೆ ಈ ಸಮಾನತೆಯನ್ನು ಸಾಧಿಸಲು ಅಡ್ಡಿಯಾಗಿರುವ ಕಾರಣಗಳು ಮೂರು. ಒಂದು ಕೃಷಿ ಕ್ಷೇತ್ರವನ್ನು ವಿಸ್ತರಿಸದೇ ಇರುವುದು, ಎರಡು ಕೃಷಿ ಜನಾಂಗ ಬೇರೆ ಕ್ಷೇತ್ರಗಳಲ್ಲಿ ತೊಡಗುವಂತೆ ಮಾಡಬಲ್ಲ ಆರ್ಥಿಕತೆ ಇಲ್ಲದಿರುವುದು, ಮೂರು ಕೃಷಿ ಜನಾಂಗ ಈಗಿರುವ ಬೇರೆ ಕ್ಷೇತ್ರಗಳಿಗೆ ಪ್ರವೇಶಿಸಲು ಅವಕಾಶವಿಲ್ಲದಿರುವುದು. ಈ ಮೂರೂ ಕಾರಣಗಳ ಹಿಂದೆ ಕೃಷಿಯೇತರ ಜನಾಂಗದ ಕುತಂತ್ರವಿದೆ. ಇದನ್ನು ಗುರುತಿಸದ ಹಿಂದುಳಿದ ವರ್ಗಗಳ ಹೋರಾಟ ಅರ್ಥಹೀನವಾದದ್ದು.

ಮೇಲಿನ ಮೊದಲನೇ ಎರಡು ಕಾರಣಗಳಿಂದಾಗಿ ಸೊಂಟಮುರಿದ ಆರ್ಥಿಕತೆಯನ್ನೂ ಮೀರಿ ಮುನ್ನುಗ್ಗಿ ಬಂದ ಕೃಷಿ ಕ್ಷೇತ್ರದ ತರುಣ ತರುಣಿಯರಿಗೆ ಬೇರೆ ಕ್ಷೇತ್ರಗಳಲ್ಲಿ ಅವಕಾಶಗಳು ಈಗಿರುವ ವ್ಯವಸ್ಥೆಯಲ್ಲಿ ಬಹಳ ಸೀಮಿತ. ಇದಕ್ಕೆ ಕಾರಣ ಅಖಂಡ ಭಾರತ ಕಟ್ಟದ ಅಖಂಡಭಾರತ ಧರ್ಮೀಯರು. ಇಡೀ ಭಾರತದಲ್ಲಿ ಇವರು ಒಂದು ಸಣ್ಣ ರಾಜ್ಯದ ಜನಸಂಖ್ಯೆಗೆ ಸಮಾನರು. ಸುಮಾರು ಎರಡೂವರೆ ಕೋಟಿ ಜನ. ರಾಜ್ಯಗಳ ಮಟ್ಟದಲ್ಲಿ ಶೇಕಡಾ 50 ಕ್ಕಿಂತ ಹೆಚ್ಚಿಗೆ ಹಿಂದುಳಿದ ವರ್ಗಗಳಿಗೆ ಮೀಸಲು ಸ್ಥಾನ ಇಡಕೂಡದೆಂದು ತೀರ್ಪುಕೊಟ್ಟವರೂ ಇವರೇ. ಅಖಿಲ ಭಾರತ ಉದ್ಯಮಗಳಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲು ಸ್ಥಾನವನ್ನು ಕೊಡದೆಯೇ 27 ವರ್ಷಗಳನ್ನು ತಳ್ಳಿರುವವರೂ ಈ ಶೇಕಡ ನಾಲ್ಕು ಜನರೇ. ಮ ಳಗಳೇ ಬೆಳೆಯುದ ಪ್ರದೇಶವನ್ನು ಅರಣ್ಯವೆಂದು ರೈತರಿಗೆ ಹಂಚದೇ ಇಟ್ಟಿರುವವರೂ ಈ ಜನರೇ. ಗ್ರಾಮ ಕೈಗಾರಿಕೆಗಳ ಅಲಕ್ಷಿಸಿ ನಗರ ಕ್ಷೇತ್ರದ ಸಂಕೀರ್ಣ ಕೈಗಾರಿಕೆಗಳನ್ನು ಮುಂದುವರೆಸುತ್ತಿರುವವರೂ ಈ ಜನರೇ, ಅಂತಿಮವಾಗಿ ಇವರ ಉದ್ದಿಶ್ಯ ಗ್ರಾಮಾಂತರ ಪ್ರದೇಶವನ್ನೂ ಬಗ್ಗು ಬಡಿದು ತಮ್ಮ ಕ್ಷೇತ್ರವನ್ನು ಸುರಕ್ಷಿತವಾಗಿ ಇಟ್ಟುಕೊಳ್ಳುವುದು.

ಇತ್ತಿಚೆಗೆ ಬಂದ ಹಾವನೂರರ ಶಿಫಾರಸುಗಳು ಇಡೀ ಭಾರತದಲ್ಲೇ ಅತ್ಯಂತ ಪಾಂಡಿತ್ಯಪೂರ್ಣ ಪ್ರಯತ್ನ- ಹಿಂದುಳಿದ ವರ್ಗಗಳ ಸಮಸ್ಯೆಗಳ ಬಗ್ಗೆ. ಆದರೆ ಈ ವರದಿ ಕೂಡ ಶ್ರೇಷ್ಠ ನ್ಯಾಯಾಲಯದ ತೀರ್ಪುಗಳ ಚೌಕಟ್ಟಿನೊಳಗೆ ಕೇವಲ ಶೇ.50 ಸ್ಥಳಗಳನ್ನು ಕರ್ನಾಟಕದ ಶೇ.90 ಹಿಂದುಳಿದ ಜನರಿಗೆ ಹಂಚುವ ಕೆಲಸ ಮಾಡಿದೆ. ಈಗಿರುವ ವ್ಯವಸ್ಥೆಯಲ್ಲೇ ಶೇ.90 ಹಿಂದುಳಿದ ಜನರಿಗೆ ಶೇ.90 ಸ್ಥಳಾವಕಾಶ ಸಿಗಬೇಕಾದರೆ ನ್ಯಾಯಾಲಯದ ತೀರ್ಪುಗಳನ್ನು ಅಸಿಂಧುವಾಗಿಸುವಂತೆ ಸಂವಿಧಾನದ ತಿದ್ದುಪಡಿಯಾಗಬೇಕು. ಎಲ್ಲ ಹಿಂದುಳಿದ ಜಾತಿಗಳಲ್ಲೂ ದಕ್ಷ ಅಭ್ಯರ್ಥಿಗಳ ಹೆಚ್ಚಳ ಇರುವಾಗ ಮತ್ತು ಅವರ ನಿರುದ್ಯೋಗ ಇರುವಾಗ ಶೇಕಡಾ 50 ದಕ್ಷತೆ ಕ್ಷೇತ್ರವನ್ನು ಮುಂದುವರಿಸುವುದು ಒಂದು ಕುತಂತ್ರವೇ ಸರಿ.

ಇದಲ್ಲದೆ ಅಖಿಲ ಭಾರತ ಸೇವಾ ಕ್ಷೇತ್ರಗಳಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲು ಸ್ಥಾನಗಳೇ ಇಲ್ಲ. ಈ ಕ್ಷೇತ್ರಗಳು ಸಂಪೂರ್ಣವಾಗಿ ಈ ಅಖಂಡಭಾರತ ಧರ್ಮೀಯರದ್ದೇ ಆಗಿಹೋಗಿವೆ. ರಾಜ್ಯಮಟ್ಟದಲ್ಲಿ ಶೇಕಡಾ 50 ಜಾಗಗಳನ್ನು ರಾಷ್ಟ್ರಮಟ್ಟದಲ್ಲಿ ಶೇಕಡಾ 95 ಜಾಗಗಳನ್ನೂ ಲಪಟಾಯಿಸುತ್ತಿರುವ ಈ ವ್ಯವಸ್ಥೆಯ ವಿರುದ್ಧ ಎಲ್ಲ ಹಿಂದುಳಿದ ವರ್ಗಗಳೂ ಹೋರಾಟ ಮಾಡಬೇಕಾಗಿದೆ. ಸಾಮಾಜಿಕ ನ್ಯಾಯ ಎನ್ನುವ ಪದಕ್ಕೆ ಅರ್ಥ ಬರುವುದು ಇದನ್ನು ಸಾಧಿಸಿದಾಗ ಮಾತ್ರ.

ಇದರ ಜೊತೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ಸಮಾನತೆ ಸಾಧಿಸಲು, ಗ್ರಾಮಾಂತರ ಆರ್ಥಿಕ ವ್ಯವಸ್ಥೆ ಜೀವಂತವಾಗುವಂತೆ ಗ್ರಾಮಕೈಗಾರಿಕೆಗಳ ಸ್ಥಾಪನೆಗಾಗಿ ಅಂತರ ಗ್ರಾಮ ಮತ್ತು ನಗರಗಳ ನಡುವಿನ ಸಮಾನತೆಗಾಗಿಯೂ ಎಲ್ಲ ಹಿಂದುಳಿದ ವರ್ಗಗಳೂ ಒಟ್ಟಾಗಿ ಹೋರಾಟಮಾಡಿದಾಗ ಮಾತ್ರ ಹಿಂದುಳಿದ ವರ್ಗಗಳ ಸಮಸ್ಯೆಗಳಿಗೆ ಉತ್ತರ ದೊರಕುವುದು.

—ಎಂ. ಡಿ. ನಂಜುಂಡಸ್ವಾಮಿ

# ಹೆಂಡತಿಯ ಶೀಲ, ಜೀವನೋಪಾಯದ ತೋಟ ಎರಡನ್ನೂ ಕಳಕೊಂಡ ಹನಗವಾಡಿ ನಿಂಗಪ್ಪ

ವರದಿ : ಮಾಂತೇಶಪ್ಪ ಹನಗವಾಡಿ

ಹನಗವಾಡಿಯ ದಲಿತ- ನಿಂಗಪ್ಪ ಈಗ ಪೂರ್ಣ ಅನಾಥ. ಒಂದು ಕಡೆ ಮೊನ್ನೆ ತನಕ ಜೀವನೋಪಾಯವಾಗಿದ್ದ ಒಂದು ಚಿಕ್ಕ ಎಲೆ ತೋಟ ಕೈಬಿಟ್ಟೋದದ್ದಲ್ಲದೆ ಇನ್ನೊಂದು ಕಡೆ ಶೀಲವತಿಯಾದ ಹೆಂಡತಿಯ ಶೀಲ ಹಾಳಾದದ್ದು-ಇನ್ನು ಬದುಕಲೇಬಾರದು ಎನಿಸಿಬಿಟ್ಟಿದೆ

ನಿಂಗಪ್ಪ ಎಲೆ ತೋಟವನ್ನು ಮೇಲ್ಜಾತಿಯ ಈರಪ್ಪನಿಂದ ಗೇಣಿಗೆ ಪಡೆದಿದ್ದ. ಮೊನ್ನೆತನಕ ಇದ ಬಿಡುವ ಪ್ರಮೇಯವೇ ಬಂದಿರಲಿಲ್ಲ. ಆದರೆ ಈಗ ಈರಪ್ಪನ ಮಗ ಬಸವರಾಜು ನಿಂಗಪ್ಪನ ಹೆಂಡತಿಯ ಮೇಲೆ ಎಸಗಿದ ಅತ್ಯಾಚಾರದ ಜೊತೆಗೆ ಎಲೆ ತೋಟವೂ ಕೈಬಿಟ್ಟುಹೋಗಿದೆ

ನಿಂಗಪ್ಪ ತೋಟಕ್ಕೋಗಿದ್ದ. ಹೆಂಡತಿ ನಿಂಗಪ್ಪನಿಗೆ ಊಟ ತೆಗೆದುಕೊಂಡು ಬಂದಳು. ಆದರೆ ಗಂಡ ನಿಂಗಪ್ಪ ತೋಟದಲ್ಲಿರಲಿಲ್ಲ. ಬದಲಿಗೆ ಈರಪ್ಪನ ಮಗ 22ರ ಬಸವರಾಜು ತೋಟದಲ್ಲಿದ್ದ. ಇವನ ಕಾಮಪಿಪಾಸೆಗೆ ಗರ್ಭಿಣಿ ನಿಂಗಪ್ಪನ ಹೆಂಡತಿ ಬಲಿಯಾಗಬೇಕಾಯಿತು. ಇವಳ ಕೂಗು ಕಿರುಚಾಟ ತೋಟದಲ್ಲಿದ್ದ ಇನ್ನೊಬ್ಬ-ತಿಪ್ಪಣ್ಣ-ನಿಗೂ ಕೇಳಿಸಲಿಲ್ಲ. ಅವನಿಗೂ ಬಲಿಪಶುವಾಗಬೇಕಾಯಿತು ಇವಳು.

ತನ್ನ ಗರ್ಭಿಣಿ ಹೆಂಡತಿಯ ಮೇಲೆ ಆದ ಅತ್ಯಾಚಾರದ ಬಗ್ಗೆ ನಿಂಗಪ್ಪ ಪೋಲೀಸರಿಗೆ ದೂರಿತ್ತು ಗೋಳಿಟ್ಟ. ಸಾಕ್ಷಿ ಇಲ್ಲ ಎನ್ನುವ ನೆಪಕ್ಕೆ ಇವನ ಕೇಸು ಹಿಡಿಯಲಿಲ್ಲಿ. ಆದರೆ ಸಾವುಕಾರ ಈರಪ್ಪ ನಿಂಗಪ್ಪನ ಪರ ವಹಿಸಿದ 10 ಜನರ ಮೇಲೆ 'ಮನೆ ನುಗ್ಗಿ ಒಡೆಯಲು ಬಂದರು' ಎಂದು ಕಂಪ್ಲೈಂಟು ಕೊಟ್ಟ. ಕೇಸು ಹಿಡಿಯಿತು. ಇದರ ಜೊತೆಯಲ್ಲೇ 'ನೀ ತೋಟಕ್ಕೆ ಬಂದ್ರೆ ಪ್ರಾಣ ತೆಗಿತೀನಿ' ಅಂದ. ತೋಟ ಕಿತ್ತುಕೊಂಡ.

ಈಗ ದಲಿತ ನಿಂಗಪ್ಪನಿಗೆ ಜೀವನೋಪಾಯದ ತೋಟವಿಲ್ಲ. ಹೆಂಡತಿಯ ಶೀಲವೂ ಉಳಿದಿಲ್ಲ. 'ಇನ್ನು ನಾ ಸಾಯುವುದಷ್ಟೇ ಉಳಿದಿದೆ' ಎನ್ನುತ್ತಾನೆ ನಿಂಗಪ್ಪ.


# ಪಂಚಮ

## ದಲಿತ ಪಾಕ್ಷಿಕ

ಚಂದಾ ವಿವರ :

ಒಂದು ವಿಶೇಷಾಂಕ ಮತ್ತು ಅಂಚೆ ವೆಚ್ಚ ಸೇರಿ ವಾರ್ಷಿಕ ಚಂದಾ : ಕೇವಲ 5 ರೂ.ಮಾತ್ರ

ಇಂದೇ ಬರೆಯಿರಿ :

ಪಂಚಮ'
2649/2, ಬಿ.ಬಿ.ಅಂಡ್ ಸನ್ಸ್ ರೋಡ್
ಕೆ. ಜಿ. ಕೊಪ್ಪಲು, ಮೈಸೂರು-9

ಸಂಪಾದಕ : ಇಂದೂಧರ ಹೊನ್ನಾಪುರ
ಜೊತೆಗೆ : ರಾಮದೇವ ರಾಕೆ
ಶಿವಾಜಿ ಗಣೇಶನ್
ಶಿವಮಲ್ಲ ದೇವನೂರು
ಪ್ರಕಾಶಕ : ಗೋವಿಂದಯ್ಯ